ಈ ಸಂಜೆ

ಭಾನುವಾರ 30 ಡಿಸೆಂಬರ್ 2007




ನಗರದ ಗಾಂಧಿಶಾಂತಿ ಪ್ರತಿಷ್ಠಾನ ಏರ್ಪಡಿಸಿದ್ದ ಡಬ್ಲ್ಯೂ.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಹಿರಿಯ ಗಾಂಧಿವಾದಿ ಡಾ.ಹೋ.ಶ್ರೀನಿವಾಸಯ್ಯ ಅವರಿಗೆ ವೂಡೇ ಪ್ರತಿಷ್ಠಾನ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಸಮಾರಂಭದಲ್ಲಿ ಪ್ರೊ.ಸಿ.ಕೆ.ಎನ್.ರಾಜ, ಪ್ರೊ.ರವಿವರ್ಮಕುಮಾರ್, ಅಧ್ಯಕ್ಷ ವೂಡೆ ಪಿ.ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಭಾನುವಾರ, 30 ಡಿಸೆಂಬರ್ 2007



## ಉದ್ಘಾಟನೆ...

ಅಖಿಲ ಭಾರತ ಬ್ರಹ್ಮ ಸಮಾಜದ 117 ನೇ ವಾರ್ಷಿಕ ಅಧಿವೇಶನವನ್ನು ಬೆಂಗಳೂರು ವಿವಿ ಗಾಂಧಿ ಅಧ್ಯಯನ ಕೇಂದ್ರದ ನಿರ್ದೇಶಕ ಡಾ।ಡಿ.ಜೀವನ್ ಕುಮಾರ್ ಉದ್ಘಾಟಿಸಿದರು. ಬೆಂಗಳೂರು ಬ್ರಹ್ಮ ಸಮಾಜದ ಅಧ್ಯಕ್ಷ ಡಾ।ಗುರುದಾಸ್ ಹಾಗೂ ಶಿಕ್ಷಣ ತಜ್ಞ ಪ್ರೊ. ಪಿ.ಕೃಷ್ಣ ಉಪಸ್ಥಿತರಿದ್ದರು.

ಸಂಜೆವಾಣಿ
ಶನಿವಾರ 29 ಡಿಸೆಂಬರ್ 2007



ಇತ್ತೀಚೆಗೆ ಲಯನ್ಸ್ ಕ್ಲಬ್ ಬೆಂಗಳೂರು ಮಾಧವನಗರ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ ಸನ್ಮಾನ ಸಮಾರಂಭದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಖ್ಯಾತ ಮೂತ್ರರೋಗ ತಜ್ಞ ಡಾ. ಹೆಚ್. ಕೆ.ನಾಗರಾಜ್‌ರವರನ್ನು ಸನ್ಮಾನಿಸಲಾಯಿತು. ಮಾಜಿ ಮಹಾಪೌರ ಕೆ.ಎಂ. ನಂಜಪ್ಪ; ಶಿಕ್ಷಣ ತಜ್ಞ ಹಾಗೂ ಸಮಾಜ ಸೇವಕ ವೂಡೇ ಪಿ.ಕೃಷ್ಣ, ರಾಜ್ಯ ರೆಡ್ ಕ್ರಾಸ್ ಸಂಸ್ಥೆಯ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಲಯನ್ಸ್ ಸಂಸ್ಥೆ ಅಧ್ಯಕ್ಷ ನಂಜುಂಡಪ್ಪ ಹಾಗೂ ಡಬ್ಲ್ಯೂ ಜಿ. ರಾಮಕೃಷ್ಣ ಉಪಸ್ಥಿತರಿದ್ದರು.

ಈ ಸಂಜೆ

ಶನಿವಾರ 29 ಡಿಸೆಂಬರ್ 2007



ಮಾಧವನಗರದ ಲಯನ್ಸ್ ಕ್ಲಬ್ ಮತ್ತು ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಮೂಳೆ ರೋಗ ತಜ್ಞ ಡಾ. ಎಚ್.ಕೆ. ನಾಗರಾಜ್ ಅವರನ್ನು ಸನ್ಮಾನಿಸಲಾಯಿತು. ಮಾಜಿ ಮೇಯರ್ ಟಿ.ಎನ್. ನಂಜಪ್ಪ, ವೂಡೇ ಪಿ. ಕೃಷ್ಣ, ರಾಜು ಚಂದ್ರಶೇಖರ್, ನಂಜುಂಡಪ್ಪ ಜಿ. ರಾಮಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಶನಿವಾರ, 29 ಡಿಸೆಂಬರ್ 2007



## ವಾರ್ಷಿಕೋತ್ಸವ

*ಶೇಷಾದ್ರಿಪುರ ಸಂಜೆ ಪದವಿ ಪೂರ್ವ ಕಾಲೇಜಿನ ವಾರ್ಷಿಕೋತ್ಸವಕ್ಕೆ ಟಿ.ಎಸ್. ತುಳಸೀಕುಮಾರ್ ಚಾಲನೆ ನೀಡಿದರು. ಕೆ.ಎಂ. ನಂಜಪ್ಪ, ವೂಡೇ ಪಿ. ಕೃಷ್ಣ ಹಾಜರಿದ್ದರು.*



ಪ್ರಜಾವಾಣಿ

ಶುಕ್ರವಾರ
28ನೇ ಡಿಸೆಂಬರ್ 2007

3A B



## ಉದ್ಘಾಟನೆ...

ಶೇಷಾದ್ರಿಪುರ ಸಂಜೆ ಪದವಿ ಪೂರ್ವ ಕಾಲೇಜಿನ ಶೈಕ್ಷಣಿಕ ವರ್ಷದ ವಾರ್ಷಿಕೋತ್ಸವವನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯ ಸಹಾಯಕ ನಿರ್ದೇಶಕ ಟಿ.ಎಸ್.ತುಳಸೀಕುಮಾರ್ ದೀಪ ಬೆಳಗಿಸಿ ಉದ್ಘಾಟಿಸಿದರು. ಕೆ.ಎಂ.ನಂಜಪ್ಪ, ವೂಡೇ ಪಿ. ಕೃಷ್ಣ, ಎಸ್.ವೀರಭದ್ರಯ್ಯ, ಸರೋಜ ನಂಜಪ್ಪ, ಎಂ.ಆರ್.ಶ್ರೀನಿವಾಸ್ ಇತರರು ಪಾಲ್ಗೊಂಡಿದ್ದರು.

BANGALORE ಉದಯವಾಣಿ
ಶುಕ್ರವಾರ 28 ಡಿಸೆಂಬರ್ 2007



ಬೆಂಗಳೂರಿನ ಮಾಧವನಗರ ಲಯನ್ಸ್ ಕ್ಲಬ್ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ವತಿಯಿಂದ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ಮೂತ್ರರೋಗ ತಜ್ಞ ಡಾ.ಎಚ್.ಕೆ.ನಾಗರಾಜ್ ಅವರನ್ನು ಸನ್ಮಾನಿಸಲಾಯಿತು. ಮಾಜಿ ಮೇಯರ್ ಕೆ.ಎಂ.ನಂಜಪ್ಪ, ಶಿಕ್ಷಣ ತಜ್ಞ ಡಬ್ಲ್ಯೂ. ಪಿ.ಕೃಷ್ಣ, ರಾಜು ಚಂದ್ರಶೇಖರ್, ನಂಜುಂಡಪ್ಪ ಉಪಸ್ಥಿತರಿದ್ದರು.

ಉದಯವಾಣಿ
ಗುರುವಾರ ಡಿಸೆಂಬರ್ 27, 2007

ಚಿತ್ರಾಂಕಣ

# ಪ್ರಶಸ್ತಿ ಪ್ರದಾನ



ಗಾಂಧಿ ಶಾಂತಿ ಪ್ರತಿಷ್ಠಾನ ವತಿಯಿಂದ ಬೆಂಗಳೂರಿನಲ್ಲಿ ಇತ್ತೀಚೆಗೆ ಏರ್ಪಡಿಸಿದ್ದ ಸಮಾರಂಭದಲ್ಲಿ ಗಾಂಧಿವಾದಿ ಡಾ। ಹೊ. ಶ್ರೀನಿವಾಸಯ್ಯ ಅವರಿಗೆ ವೂಡೇ ಪ್ರತಿಷ್ಠಾನ ಪ್ರಶಸ್ತಿ ಪ್ರದಾನ ಮಾಡಲಾಯಿತು. ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ. ಕೃಷ್ಣ, ಹಿರಿಯ ವಕೀಲ ಪ್ರೊ। ರವಿವರ್ಮ ಕುಮಾರ್, ಶಿಕ್ಷಣತಜ್ಞ ಪ್ರೊ। ಎಚ್.ಆರ್. ದಾಸೇಗೌಡ, ಪ್ರೊ। ಸಿ.ಕೆ.ಎನ್. ರಾಜ ಹಾಜರಿದ್ದರು.

ಉದಯವಾಣಿ

ನಮ್ಮ ಬೆಂಗಳೂರು

ಡಿಸೆಂಬರ್ 25, 2007

# ಬೆಂಗಳೂರಿನ ಹೆಮ್ಮೆಯ ಸಂಸ್ಥೆಗಳು: ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ

## ಬೆಂಗಳೂರಿನ ಇತಿಹಾಸ ಮಾಲೆ

■ ನರೇಶ್ ಮಾನ

ಕರ್ನಾಟಕ ರಾಜ್ಯ ರೆಡ್‌ಕ್ರಾಸ್ ಶಾಖೆಯನ್ನು ಕಟ್ಟಿ ಬೆಳೆಸಿದವರು ರೂಪಿಸಿದ ವೈವಿಧ್ಯಮಯ ಸೇವಾಯೋಜನೆಗಳ ಭವ್ಯ ಪರಂಪರೆಯನ್ನು ಅಷ್ಟೇ ಸಮರ್ಪಕವಾಗಿ ನಿರ್ವಹಿಸುತ್ತಿರುವವರು ಪ್ರಸ್ತುತ ಈ ಶಾಖೆಯ ವೈಸ್ ಚೇರ್ಮನ್ ಆದ ವೂಡೆ ಪುಟ್ಟಯ್ಯ ಕೃಷ್ಣ. ಈ ಶಾಖೆಯ ಇಲ್ಲಿಯವರೆಗಿನ ವೈಸ್ ಚೇರ್ಮನ್‌ಗಳ ಪೈಕಿ ಅತ್ಯಂತ ಕಿರಿಯ ವಯಸ್ಸಿಗೆ ಈ ಪ್ರತಿಷ್ಠಿತ ಗೌರವಾನ್ವಿತ ಸ್ಥಾನಕ್ಕೆ ಬಂದ ಹೆಗ್ಗಳಿಕೆ ಇವರದು. ಅಜ್ಜ ವೂಡೆ ಎಚ್. ಹನುಮಂತಪ್ಪ, ಗಾಂಧಿವಾದಿಯಾಗಿದ್ದ ಅವರು ಸ್ವಾತಂತ್ರ್ಯ ಹೋರಾಟ, ಮೈಸೂರು ರಾಜ್ಯ ಕಾಂಗ್ರೆಸ್ - ಮೈಸೂರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಸಂಸ್ಥಾಪಕ ಸದಸ್ಯರಾಗಿದ್ದವರು. ಬೆಂಗಳೂರು ನಗರ ಸಭಾ ಸಮಿತಿಯ ಅಧ್ಯಕ್ಷರಾಗಿ, ಮೈಸೂರು ರಾಜ್ಯ ಪ್ರಜಾಪ್ರತಿನಿಧಿ ಸಮಿತಿಯ ಸದಸ್ಯರಾಗಿ ಹಲವಾರು ಸಂಘ ಸಂಸ್ಥೆಗಳ ಮೂಲಕ ಸೇವಾಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದವರು.

ವೂಡೆ ಪಿ.ಕೃಷ್ಣ ಅವರ ತಂದೆ ಡಬ್ಲ್ಯು.ಎಚ್. ಪುಟ್ಟಯ್ಯ ಅವರೂ ಗಾಂಧಿವಾದಿಯಾಗಿ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಭಾಗವಹಿಸಿದ್ದವರು. ವಾಣಿಜ್ಯೋದ್ಯಮಿ ಆಗಿದ್ದವರು. ಈ ರೀತಿ ಭವ್ಯ ಮನೆತನದ ಹಿನ್ನೆಲೆಯ ಜೊತೆಗೆ ಕೃಷ್ಣ ಅವರಿಗೆ ಶಿಸ್ತುಬದ್ಧವಾದ ಪ್ರಾರಂಭಿಕ ಶಿಕ್ಷಣ ದೊರೆತದ್ದು ಮೈಸೂರಿನ ಶ್ರೀರಾಮಕೃಷ್ಣ ವಿದ್ಯಾಶಾಲೆಯಲ್ಲಿ. 'ಸಹಜವಾಗಿ ಯಾರು ಇತರರಿಗಾಗಿ ಬದುಕುತ್ತಾರೋ ಅವರದ್ದೇ ನಿಜವಾದ ಜೀವನ' ಎಂಬ ಸ್ವಾಮಿ ವಿವೇಕಾನಂದರ ನುಡಿಯಿಂದ ಪ್ರೇರಿತರಾದ ಇವರು ತಮ್ಮ 21ನೇ ವಯಸ್ಸಿಗೆ 1984ರಲ್ಲಿ ಹಿರಿಯರಾದ ಕೆ.ಎಂ. ನಂಜಪ್ಪನವರಿಂದ ಪ್ರೇರಿತರಾಗಿ ರೆಡ್‌ಕ್ರಾಸ್ ರಾಜ್ಯ ಶಾಖೆ ಸೇರಿದರು. 18 ವರ್ಷಗಳ ಕಾಲ ಶಾಖೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು 2002ರಲ್ಲಿ ಖಜಾಂಚಿಯಾಗಿ ಆಯ್ಕೆಗೊಂಡರು. ಆಗ ಈ ಶಾಖೆಯ ವೈಸ್ ಚೇರ್ಮನ್ ಆಗಿದ್ದ ಡಾ| ಡಿ.ಎಂ. ನಂಜಪ್ಪ ಅವರು ವೂಡೇ ಪಿ. ಕೃಷ್ಣ ಶಾಖೆಯ ಆರ್ಥಿಕ ಸ್ವಾವಲಂಬನೆಗಾಗಿ ನಡೆಸುತ್ತಿದ್ದ ಚಿಂತನೆ ಹಾಗೂ ಸಲಹೆಗಳನ್ನು ಎಷ್ಟು ಮೆಚ್ಚಿಕೊಂಡಿದ್ದರೆಂದರೆ ತಮ್ಮ ವೈಸ್ ಚೇರ್ಮನ್ ಅವಧಿ ಮುಗಿಸಿ ತೆರಳುವಾಗ ಇವರ *Co-operation and wise counsel*ಗಾಗಿ ವಿಶೇಷ ಕೃತಜ್ಞತೆ ಸಲ್ಲಿಸಿದ್ದಾರೆ. ಒಂದು ವರ್ಷದಲ್ಲೇ 300ಕ್ಕೂ ಹೆಚ್ಚು ಆಜೀವ ಸದಸ್ಯರನ್ನು ಸಂಸ್ಥೆಗೆ ಸೇರಿಸಿದ ಕೃಷ್ಣ 2006ರಲ್ಲಿ ಅವಿರೋಧವಾಗಿ ರಾಜ್ಯ ಶಾಖೆಯ ಅತ್ಯಂತ ಕಿರಿವಯಸ್ಸಿನ ವೈಸ್ ಚೇರ್ಮನ್ ಆಗಿ ಆಯ್ಕೆಗೊಂಡರು.

ದೆಹಲಿಯ ರೆಡ್‌ಕ್ರಾಸ್ ರಾಷ್ಟ್ರೀಯ ಕೇಂದ್ರ ಆಡಳಿತ ಮಂಡಳಿಯಲ್ಲಿ ಕೆ.ಎಂ. ನಂಜಪ್ಪ ಅವರ ನಂತರ ಡಾ| ಡಿ.ಎಂ. ನಂಜುಡಪ್ಪ ಸದಸ್ಯರಾದ ನಂತರ ರಾಜ್ಯವನ್ನು ಪ್ರತಿನಿಧಿಸುವ ಸದಸ್ಯರೇ ಇರಲಿಲ್ಲ. 2007ರಲ್ಲಿ ಕೃಷ್ಣ ಅವರು ಈ ರಾಷ್ಟ್ರೀಯ ಆಡಳಿತ ಮಂಡಳಿಗೆ ಅವಿರೋಧವಾಗಿ ಆಯ್ಕೆಯಾಗಿ ರಾಜ್ಯವನ್ನೇ ಪ್ರತಿನಿಧಿಸುತ್ತಿರುವುದು ಹೆಮ್ಮೆಯ ಸಂಗತಿ. 2007ರ ಆಗಸ್ಟ್‌ನಲ್ಲಿ ನ್ಯೂಜಿಲೆಂಡ್‌ನಲ್ಲಿನ ವೆಲ್ಲಿಂಗ್ಟನ್‌ನಲ್ಲಿ ನಡೆದ ದ್ವಿತೀಯ *Commonwealth Conference on International Humanitarian Law*ದಲ್ಲಿ ಭಾರತವನ್ನು ಪ್ರತಿನಿಧಿಸಿ, ಕೆಲವು ಪ್ರಮುಖ ನಿರ್ಧಾರಗಳನ್ನು ಕೈಗೊಂಡ ಚರ್ಚೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ. 2006ರಲ್ಲಿ 132 ದೇಶಗಳು ಭಾಗವಹಿಸಿದ್ದ *International federation of RedCross and Red Crescent Societies*ನಿಂದ ದೆಹಲಿಯ ಕೇಂದ್ರ ಕಛೇರಿಯು ಸುನಾಮಿ ದುರಂತದಲ್ಲಿ ಸಲ್ಲಿಸಿದ ಅದ್ಭುತ ಸೇವೆಗಾಗಿ ಹೆನ್ರಿ ಡ್ಯುನಾ ಪ್ರತಿಷ್ಠಿತ ಪ್ರಶಸ್ತಿಯನ್ನು ಪಡೆಯಿತು. ಈ ಕಾರ್ಯದಲ್ಲಿ ಕೃಷ್ಣ ನೇತೃತ್ವದ ರಾಜ್ಯ ಶಾಖೆಯು ಗಣನೀಯ ಪ್ರಮಾಣದ ಕೊಡುಗೆ ನೀಡಿತು. ರಾಜ್ಯದಲ್ಲಿ ಕಳೆದ ಹಲವಾರು ದಶಕಗಳಿಂದ ರೆಡ್‌ಕ್ರಾಸ್ ಕಾರ್ಯನಿರ್ವಹಿಸುತ್ತಿದ್ದರೂ ಸಂಘಟನೆಯ ಸಂಸ್ಥಾಪಕ ಹೆನ್ರಿ ಡ್ಯುನಾ ಅವರ ಪ್ರತಿಮೆಯೊಂದನ್ನು ಬೆಂಗಳೂರಿನಲ್ಲಿ ಸ್ಥಾಪಿಸಲಾಗಿರಲಿಲ್ಲ. ಕೃಷ್ಣ ಅವರ ಪ್ರಯತ್ನದಿಂದಾಗಿ ಆರ್.ಎಂ.ಡಿ. ಆರಾಧ್ಯ ವೃತ್ತದಲ್ಲಿರುವ ರೆಡ್‌ಕ್ರಾಸ್ ಭವನದ ಮುಂಭಾಗದಲ್ಲಿ ಆ ಆಕರ್ಷಕ ಪ್ರತಿಮೆಯನ್ನು ಸ್ಥಾಪಿಸಲಾಗಿದೆ.

ಕೃಷ್ಣ ಅವರ ಪ್ರಯತ್ನದಿಂದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಈ ಶಾಖೆಗೆ ಒಂದು ಆ್ಯಂಬುಲೆನ್ಸ್ ಅನ್ನು ಕೊಡುಗೆಯಾಗಿ ನೀಡಿದೆ. ಹಾಗೆಯೇ ಇನ್ಫೋಸಿಸ್ ಪ್ರತಿಷ್ಠಾನ, ಕಾರ್ಪೊರೇಷನ್ ಬ್ಯಾಂಕ್, ಕೆನರಾ ಬ್ಯಾಂಕ್ ಹಾಗೂ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೆಎಸ್‌ಎಫ್‌ಸಿ ಯಂತಹ ಪ್ರತಿಷ್ಠಿತ ಸಂಸ್ಥೆಗಳನ್ನು ತೊಡಗಿಸಿ 2002ರಿಂದ 2005ರವರೆಗೆ ರಾಜ್ಯದ 8 ಜಿಲ್ಲೆಗಳಲ್ಲಿನ ಸುಮಾರು 4,000 ಅಂಗವಿಕಲರಿಗೆ ಉಪಯುಕ್ತ ಸಾಧನಗಳನ್ನು ವಿತರಿಸಿದ್ದಾರೆ. ಮುಂಚೆ ರಾಜ್ಯದಲ್ಲಿ ಜೂನಿಯರ್ ರೆಡ್‌ಕ್ರಾಸ್ ಮಾತ್ರ ಕಾರ್ಯನಿರ್ವಹಿಸುತ್ತಿತ್ತು. ಕಾಲೇಜು ಯುವಕ ಯುವತಿಯರನ್ನು ಈ ಪವಿತ್ರ ಕಾರ್ಯದಲ್ಲಿ ತೊಡಗಿಸಲು ಯುವ ರೆಡ್‌ಕ್ರಾಸ್ ಅನ್ನು ಪ್ರಾರಂಭಿಸಿದರು. ಹಾಗೆಯೇ ಈ ಶಾಖೆಯ ಮುಖವಾಣಿಯಾಗಿ ಒಂದು ಪತ್ರಿಕೆಯನ್ನು ವೂಡೇ ಪಿ. ಕೃಷ್ಣ ಅವರ ಅವಧಿಯಲ್ಲೇ ಪ್ರಾರಂಭಿಸಲಾಯಿತು. ವರ್ಣರಂಜಿತವಾಗಿ ಬೆಂಗಳೂರು ಹಾಗೂ ರಾಜ್ಯದ ಎಲ್ಲಾ ಶಾಖೆಗಳ ಚಟುವಟಿಕೆಗಳ ಸುದ್ದಿಗಳನ್ನೊಳಗೊಂಡ ಈ ಆಕರ್ಷಕ ಪತ್ರಿಕೆ ಅತ್ಯಂತ ಜನಪ್ರಿಯವಾಗಿದೆ. ಈ ಶಾಖೆಯ ಅಭಿವೃದ್ಧಿಗೆ ಅನುವಾಗುವ ವಿಷಯಗಳ ಬಗ್ಗೆ ಹಲವಾರು ವಿಚಾರ ಸಂಕಿರಣಗಳನ್ನು ಏರ್ಪಡಿಸಿರುವ ಕೃಷ್ಣ, ರಾಷ್ಟ್ರೀಯ ಹೆದ್ದಾರಿಗಳ ಬದಿಯಲ್ಲಿರುವ ಕಾಲೇಜು ವಿದ್ಯಾರ್ಥಿಗಳಿಗೆ ಪ್ರಥಮ ಚಿಕಿತ್ಸೆ ತರಬೇತಿ ಶಿಬಿರಗಳನ್ನು ಕಾರ್ಪೊರೇಷನ್ ಬ್ಯಾಂಕ್ ನೆರವಿನೊಂದಿಗೆ ಹಮ್ಮಿಕೊಂಡು, ಯಾವುದೇ ತುರ್ತು ಪರಿಸ್ಥಿತಿಯಲ್ಲಿ ಅವರು ಕಾರ್ಯೋನ್ಮುಖರಾಗುವಂತೆ ಮಾಡಿದ್ದಾರೆ.

## ಪ್ರಗತಿಪರ ಚಿಂತನೆಯ ಯುವ ನಾಯಕತ್ವ




ಬಿ.ಕೆ. ಚಂದ್ರಶೇಖರ್ ಅವರೊಂದಿಗೆ ವೂಡೇ ಪಿ. ಕೃಷ್ಣ

ಶಿಕ್ಷಣ ಸಂಸ್ಥೆಗಳಲ್ಲಿ ರಕ್ತದಾನ ಶಿಬಿರಗಳನ್ನು ಏರ್ಪಡಿಸುವ ಕಾರ್ಯಗಳು ಕೃಷ್ಣಾ ಅವರ ಅವಧಿಯಲ್ಲಿ ಹೆಚ್ಚಾಗಿ ನಡೆದಿವೆ. ಬೆಂಗಳೂರಿನ ಪ್ರತಿಷ್ಠಿತ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿಯಾಗಿರುವ ಇವರ ಮಾರ್ಗದರ್ಶನದಲ್ಲಿ ನಡೆದ ರಕ್ತದಾನ ಶಿಬಿರಗಳಿಗಾಗಿ ಈ ಸಂಸ್ಥೆ ಸತತವಾಗಿ 3 ವರ್ಷಗಳ ಕಾಲ ಪ್ರಶಸ್ತಿ ತನ್ನದಾಗಿಸಿಕೊಂಡಿದೆ. ಇವಷ್ಟೇ ಅಲ್ಲದೆ, ರಕ್ತನಿಧಿ ಕೇಂದ್ರದಂತೆ ಔಷಧನಿಧಿ ಕೇಂದ್ರವನ್ನು ಸ್ಥಾಪಿಸುವ ಅಭಿಲಾಷೆ ಕೃಷ್ಣ ಅವರಿಗಿದೆ. ನಗರದ ಹಲವಾರು ಸಂಘ-ಸಂಸ್ಥೆಗಳು ಹಾಗೂ ಇತರರೂ ಸ್ವಯಂ ಪ್ರೇರಿತರಾಗಿ ರೆಡ್‌ಕ್ರಾಸ್‌ನ ಯಾವುದೇ ಸೇವಾ ಕ್ಷೇತ್ರದಲ್ಲಿ ವರ್ಷಕ್ಕೆ ತಲಾ 100 ಗಂಟೆಗಳ ಸೇವಾ ಕಾರ್ಯದಲ್ಲಿ ತೊಡಗುವಂತೆ ಮಾಡುವ ಯೋಜನೆಯನ್ನೂ ಹಾಕಿಕೊಂಡಿದ್ದಾರೆ. ಉನ್ನತಮಟ್ಟದಲ್ಲಿರುವಂತೆ ರಾಜ್ಯ ಮಟ್ಟದಲ್ಲೂ ಸುವ್ಯವಸ್ಥಿತ ದುರಂತ ಪರಿಹಾರ ತಂಡವನ್ನು ಸಿದ್ಧಗೊಳಿಸುವ ಪ್ರಯತ್ನವನ್ನು ಕೈಗೊಳ್ಳಲಿದ್ದಾರೆ.

ವೂಡೆ ಪಿ.ಕೃಷ್ಣ ಅವರು ರೆಡ್‌ಕ್ರಾಸ್‌ನಲ್ಲಿ ಮಾತ್ರವಲ್ಲದೇ ರೆಡ್‌ಕ್ರಾಸ್ ಹೋಮ್, ಭಾರತ್ ಸೇವಾದಳ, ಗಾಂಧಿ ಶಾಂತಿ ಪ್ರತಿಷ್ಠಾನ, ಯೂತ್ ಹಾಸ್ಟೆಲ್, ಶ್ರೀನಿವಾಸ ಮಂದಿರಂ ಚಾರಿಟೀಸ್, ನವಜೀವನ ದೈಹಿಕ ಆರೋಗ್ಯ ಸಂಸ್ಥೆ, ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ ಕೆ.ಎಸ್. ಉಚಿತ ವಿದ್ಯಾರ್ಥಿ ನಿಲಯ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಸೇರಿದಂತೆ ಕೆಲವು ಪ್ರತಿಷ್ಠಿತ ವಿದ್ಯಾಸಂಸ್ಥೆಗಳಲ್ಲಿ ಪ್ರಮುಖ ಪದಾಧಿಕಾರಿಗಳಾಗಿದ್ದಾರೆ. ವೈವಿಧ್ಯಮಯ ಸಮಾಜ ಸೇವಾಕಾರ್ಯಗಳಲ್ಲಿ ಇವರ ಕೊಡುಗೆಯನ್ನು ಗುರುತಿಸಿ ರಾಜ್ಯ ಸರ್ಕಾರ 2004ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ಅದೇ ವರ್ಷ ರೆಡ್‌ಕ್ರಾಸ್ ಸಂಸ್ಥೆ ಬೆಳ್ಳಿತಟ್ಟೆಯನ್ನು ಅರ್ಪಿಸಿದೆ. 1989ರಲ್ಲಿ ರಾಜ್ಯ ಸರ್ಕಾರದ ಯುವಜನ ಕಲ್ಯಾಣ ಇಲಾಖೆ ರಾಜ್ಯ ಯುವ ಪ್ರಶಸ್ತಿ ನೀಡಿದೆ. 2002ರಲ್ಲಿ ಮಹಾನಗರ ಪಾಲಿಕೆ ಕೆಂಪೇಗೌಡ ಪ್ರಶಸ್ತಿಯನ್ನೂ ಸಲ್ಲಿಸಿದೆ. 'ರೆಡ್‌ಕ್ರಾಸ್ ನಮ್ಮ ರಾಜ್ಯದಲ್ಲಿ ಜನಸಾಮಾನ್ಯರೆಲ್ಲರೂ ಮುಕ್ತ ಸೇವಾ ಭಾವದಿಂದ ಪಾಲ್ಗೊಳ್ಳುವ ಜನಾಂದೋಳನವಾಗಬೇಕೆಂಬುದೇ ನನ್ನ ಅಭಿಲಾಷೆ' ಎನ್ನುತ್ತಾರೆ ಸ್ಫುರದ್ರೂಪಿಗಳು, ಸದಾ ಹಸನ್ಮುಖಿಯೂ ಆದ ವೂಡೆ ಪುಟ್ಟಯ್ಯ ಕೃಷ್ಣ.

■ ಮುಂದುವರಿಯುವುದು

ಪ್ರಜಾವಾಣಿ
ಮಂಗಳವಾರ 25ನೇ ಡಿಸೆಂಬರ್ 2007




ಬೆಂಗಳೂರಿನ ಗಾಂಧಿ ಭವನದಲ್ಲಿ ಪೂಡೇ ಪ್ರತಿಷ್ಠಾನದ ವತಿಯಿಂದ ಸೋಮವಾರ ಹಮ್ಮಿಕೊಳ್ಳಲಾಗಿದ್ದ ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಗಾಂಧಿವಾದಿ ಡಾ. ಎಚ್.ಶ್ರೀನಿವಾಸಯ್ಯ ಅವರನ್ನು ಹಿರಿಯ ವಕೀಲ ಪ್ರೊ. ರವಿವರ್ಮಕುಮಾರ್ (ಬಲದಿಂದ ಮೂರನೇಯವರು) ಸನ್ಮಾನಿಸಿದರು.

25-12-2007

ಕರ್ನಾಟಕ ರಾಜಧಾನಿ



# ಶೇಷಾದ್ರಿಪುರಂ ಕಾಲೇಜಿನಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ

ಶೇಷಾದ್ರಿಪುರಂ ಕಾಮರ್ಸ್ ಕಾಲೇಜಿನ ಸಾಂಸ್ಕೃತಿಕ ಕಾರ್ಯಕ್ರಮಗಳ ಉದ್ಘಾಟನಾ ಸಮಾರಂಭ ಇತ್ತೀಚೆಗೆ ನಡೆಯಿತು. ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ ಕನ್ನಡದ ನಟ, ನಿರ್ದೇಶಕ ಮತ್ತು ನಿರ್ಮಾಪಕರಾದ ಟಿ. ಎಸ್. ನಾಗಾಭರಣ ಮಾತನಾಡುತ್ತ ಕನ್ನಡಿಗರ ಬಗ್ಗೆ ಮತ್ತು ಕನ್ನಡ ಚಲನಚಿತ್ರೋದ್ಯಮದ ಬಗ್ಗೆ ತಮ್ಮ ಮನದಾಳದ ಮಾತುಗಳನ್ನು ನಮ್ಮೊಂದಿಗೆ ಹಂಚಿಕೊಂಡರು.

ಗೌರವ ಅತಿಥಿಗಳಾಗಿ ಆಗಮಿಸಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವೂಡೆ. ಪಿ. ಕೃಷ್ಣರವರು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು.

ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಜಯಶ್ರೀ ಜೆ. ಸಿಂಗ್ ಅವರು ಸ್ವಾಗತ ಹಾಗೂ ಪ್ರಾಸ್ತಾವಿಕ ಭಾಷಣ ಮಾಡಿದರು.

# ಶೇಷಾದ್ರಿಪುರಂ ಕಾಲೇಜ್ ಕ್ಯಾಂಪಸ್‌ನಲ್ಲಿ ವಿನೂತನ ಕಾರ್ಯಕ್ರಮ

ಕಾಲೇಜ್ ಕ್ಯಾಂಪಸ್ ಎಂದಾಕ್ಷಣ ನಾವು ಆಲೋಚಿಸುವುದು ಮೈಮನಗಳನ್ನು ಪುಳಕಗೊಳಿಸುವ ಡ್ಯಾನ್ಸ್, ಪಾಪ್ ಗಾಯನ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು. ಸ್ವಲ್ಪ ನಿಲ್ಲಿ.....

ಈ ಕಾರ್ಯಕ್ರಮಗಳಿಗೆ ವಿಭಿನ್ನವಾಗಿ ಶೇಷಾದ್ರಿಪುರಂ ಎಜುಕೇಷನ್ ಟ್ರಸ್ಟ್‌ನ ಕ್ಯಾಂಪಸ್‌ನಲ್ಲಿ ನಗರದ ಮಾಧವನಗರದ ಲಯನ್ಸ್ ಕ್ಲಬ್ ಹಾಗೂ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ವತಿಯಿಂದ ಉಚಿತ ಹೃದಯ ತಪಾಸಣೆ, ಮೂಳೆ ತಪಾಸಣೆ, ಸಕ್ಕರೆ ಕಾಯಿಲೆ, ಕಣ್ಣು ತಪಾಸಣೆ, ಪ್ರಸೂತಿಗೆ ಸಂಬಂಧಿಸಿದಂತೆ, ಸಾಮಾನ್ಯ ಆರೋಗ್ಯ ತಪಾಸಣೆ ಕಾರ್ಯಕ್ರಮಗಳು ನಡೆದವು.

ಆರೋಗ್ಯ ತಪಾಸಣೆ ಕಾರ್ಯಕ್ರಮದಲ್ಲಿ ವೊಕಾರ್ಡ್ ಆಸ್ಪತ್ರೆ,



ಇಂಡಿಯನ್ ರೆಡ್ ಕ್ರಾಸ್ ಸಮುದಾಯ ಕಣ್ಣು ಆಸ್ಪತ್ರೆ, ಎಂ.ಎಸ್. ರಾಮಯ್ಯ ಆಸ್ಪತ್ರೆ ವೈದ್ಯರು ಸೇವೆ ಸಲ್ಲಿಸಿದರು.

ಶನಿವಾರ ಬೆಳಿಗ್ಗೆ 9 ಗಂಟೆಗೆ ಕಾರ್ಯಕ್ರಮವನ್ನು ಶಿಕ್ಷಣ ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ ಉದ್ಘಾಟಿಸಿದರು. ಅತಿಥಿಗಳಾಗಿ ಸಮಾರಂಭಕ್ಕೆ ಆಗಮಿಸಿದ್ದ ಎಚ್.ಕೆ. ನಾಗರಾಜ್ ಮಾತನಾಡಿ ಸಮಾಜ ನಮಗೆ ಏನು ಕೊಟ್ಟಿತು ಎನ್ನುವುದಕ್ಕಿಂತ ನಾವು ಸಮಾಜಕ್ಕೆ ಏನು ಕಾಣಿಕೆ ಕೊಟ್ಟೆವು ಎಂಬುದರ ಬಗ್ಗೆ ನಮ್ಮ ಗಮನ ಇರಬೇಕು ಎಂದರು.

ಅತಿಥಿಯಾಗಿ ಆಗಮಿಸಿದ್ದ ಲII ನಂಜುಂಡಪ್ಪ ಅವರು ವೈದ್ಯಕೀಯ ತಂಡ ಒದಗಿಸಿದರು. ರಾಜು ಚಂದ್ರಶೇಖರ್ ಅವರ ಸೇವೆ ಗಮನಾರ್ಹವಾಗಿತ್ತು.

ಶಿಕ್ಷಕರು ಹಾಗೂ ಅವರ ಕುಟುಂಬದ ಸದಸ್ಯರು ಮತ್ತು ಹೆಚ್ಚಾಗಿ ಕಡು ಬಡವರು ಶಿಬಿರದ ಪ್ರಯೋಜನ ಪಡೆದುಕೊಂಡಿದ್ದರ ಬಗ್ಗೆ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಅವರು ಸಂತಸ ವ್ಯಕ್ತಪಡಿಸಿದರು.

ನಗರದಲ್ಲಿರುವ ವಿದ್ಯಾವಂತರಿಗೆ ಆರೋಗ್ಯದ ಬಗ್ಗೆ ಅರೆ ತಿಳಿವಳಿಕೆ ಇದೆ. ಈ ಬಗ್ಗೆ ಅವರಿಗೆ ಪರಿಪೂರ್ಣ ಜ್ಞಾನ ಅಗತ್ಯ ಎಂದರು. ಶಿಬಿರದಲ್ಲಿ ತೋರಿಸಲಾದ ಪ್ರಾತ್ಯಕ್ಷಿಕೆ ವೀಕ್ಷಣೆಗೆ ಕೃಷ್ಣ ಅವರು ಜನ ಸಾಮಾನ್ಯರಿಗೆ ಸಹಕರಿಸುತ್ತಿದ್ದುದು ಗಮನಾರ್ಹವಾಗಿತ್ತು. ಸಾವಿರಕ್ಕೂ ಹೆಚ್ಚು ಜನರು ಶಿಬಿರದ ಪ್ರಯೋಜನ ಪಡೆದರು.

ಸಂಯುಕ್ತ ಕರ್ನಾಟಕ ಬೆಂಗಳೂರು

18-12-2007

# ಗಾಂಧಿ ಭವನಕ್ಕೆ ರಾಮಚಂದ್ರ ರಾಹಿ ಭೇಟಿ

ಬೆಂಗಳೂರಿನ ಹೃದಯಭಾಗದಲ್ಲಿರುವ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಭವನಕ್ಕೆ ಕೇಂದ್ರ ಗಾಂಧಿ ಶಾಂತಿ ಪ್ರತಿಷ್ಠಾನದ ಪ್ರಧಾನ ಕಾರ್ಯದರ್ಶಿಗಳಾದ ರಾಮಚಂದ್ರ ರಾಹಿ ಅವರು ಗುರುವಾರ ಭೇಟಿ ನೀಡಿದರು.

ಸಭೆಯನ್ನು ಉದ್ದೇಶಿಸಿ ಮಾತನಾಡಿದ ರಾಹಿ ಅವರು ಮಹಾತ್ಮ ಗಾಂಧಿ ತತ್ವಾದರ್ಶ ಪಾಲನೆಗೆ ಕರೆ ನೀಡಿದರು. ಜೊತೆಗೆ ಗಾಂಧಿ ತತ್ವಗಳನ್ನು ನಾವು ಮೊದಲು ಅಳವಡಿಸಿಕೊಳ್ಳುವ ಮೂಲಕ ಇತರರಿಗೆ ಮಾದರಿಯಾಗಬೇಕು ಎಂದರು.

ಸಭೆಯಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ. ಹೋ. ಶ್ರೀನಿವಾಸಯ್ಯ, ಪ್ರಧಾನ ಕಾರ್ಯದರ್ಶಿಗಳಾದ ಪ್ರೊ. ಎಚ್. ದಾಸೇಗೌಡ, ಗಾಂಧಿವಾದಿ ಲಕ್ಷ್ಮೀಚಂದ್ ಜೈನ್, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಬ್ಲ್ಯು. ಪಿ. ಕೃಷ್ಣ ಮಾತನಾಡಿದರು.

ಹಲವಾರು ಗಣ್ಯರು, ಮುತ್ಸದ್ದಿಗಳು, ಗಾಂಧಿ ತತ್ವಪಾಲಕರು ಹಾಗೂ ಇನ್ನೂ ಅನೇಕರು ಸಭೆಯಲ್ಲಿ ಉಪಸ್ಥಿತರಿದ್ದು ಸಭೆಯ ಪ್ರಯೋಜನ ಪಡೆದರು.

# ಬೆಂಗಳೂರಿನ ಹೆಮ್ಮೆಯ ಸಂಸ್ಥೆ ಭಾರತ ಸೇವಾದಲ




**ಬೆಂಗಳೂರಿನ ಭಾರತ ಸೇವಾದಲದಿಂದ 74ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 150 ಮಂದಿ ಕಾರ್ಯಕರ್ತರು ಕರ್ತವ್ಯ ನಿರ್ವಹಿಸಿದರು**

ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ 18 ಅಂಶಗಳ ರಚನಾತ್ಮಕ ಕಾರ್ಯಕ್ರಮಗಳ ತಳಹದಿಯ ಮೇಲೆ ಯುವಕರು, ಶಿಕ್ಷಕರು ಮತ್ತು ವಿದ್ಯಾರ್ಥಿಗಳನ್ನು ಸಂಘಟಿಸಿ ಶಿಸ್ತುಬದ್ಧ ರಾಷ್ಟ್ರೀಯ ಸೇವೆಗಾಗಿ ತರಬೇತಿ ನೀಡುವುದು ಭಾರತ ಸೇವಾದಲದ ಉದ್ದೇಶವಾಗಿದೆ ಎನ್ನುತ್ತಾರೆ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ, ಮಾಜಿ ಶಾಸಕ ಯು.ಆರ್. ಸಭಾಪತಿ.

ನಗರದ ಹೃದಯ ಭಾಗದಲ್ಲಿರುವ ಈ ಶಾಲೆಯಲ್ಲಿ ಇಂದೂ ಸಹ ಗಾಂಧಿ ಟೋಪಿ ಧರಿಸಿ ವಿದ್ಯಾರ್ಥಿಗಳು ಶಾಲೆಗೆ ಬರುತ್ತಿದ್ದಾರೆ. ಪೋಷಕರಿಗೂ ಮೂರು ತಿಂಗಳಿಗೆ ಒಮ್ಮೆ ತರಬೇತಿ ಕೊಡಲಾಗುತ್ತಿದೆ. ಒಟ್ಟು 14,380 ಶಾಖೆಗಳು ಹಾಗೂ 1000 ಖಾಸಗಿ ಸೇವಾದಲ ಶಾಖೆಗಳು ಕಾರ್ಯ ನಿರ್ವಹಿಸುತ್ತಿವೆ ಎಂದು ಅವರು ಹೇಳಿದರು.

ಬೆಂಗಳೂರಿನ ಭಾರತ ಸೇವಾದಲದಿಂದ 74ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 150 ಮಂದಿ ಕಾರ್ಯಕರ್ತರು ಕರ್ತವ್ಯ ನಿರ್ವಹಿಸಿದರು.

ಶೇಷಾದ್ರಿಪುರದ ಕುಮಾರಕೃಪ ರಸ್ತೆಯಲ್ಲಿದೆ ಭಾರತ ಸೇವಾದಲದ ಪ್ರಧಾನ ಕಚೇರಿ. ಶಾಲೆಗೊಂದು ಸೇವಾದಲ ಹಾಗೂ ಶಾಲೆಗೊಬ್ಬ ಯೋಗ ಶಿಕ್ಷಕ ಎಂಬ ಘೋಷಣೆಯೊಂದಿಗೆ ಶ್ರಮದಾನ ಶಿಬಿರ, ರಕ್ತದಾನ ಶಿಬಿರ, ಆರೋಗ್ಯ ತಪಾಸಣಾ ಶಿಬಿರ, ಯುವಜನ ಶಿಬಿರ, ಸಾರ್ವಜನಿಕರಿಗೆ ಮದ್ಯವರ್ಜಕ ಶಿಬಿರ, ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳನ್ನು ಭಾರತ ಸೇವಾದಲ ನಡೆಸುತ್ತಿದೆ ಎನ್ನುತ್ತಾರೆ. ಸಂಸ್ಥೆಯ ಕೋಶಾಧಿಕಾರಿ ವೂಡೆ ಪಿ. ಕೃಷ್ಣ.

ಸಭೆಗಳು, ಜಾತ್ರೆಗಳು, ಉಚಿತ ಸೇವಾ ಶಿಬಿರಗಳಲ್ಲಿ ಸೇವಾದಲ ಸ್ವಯಂ ಸೇವಕರು ಸೇವಾ ಮನೋಭಾವದಿಂದ ಕಾನೂನು ಸುವ್ಯವಸ್ಥೆ, ಶಾಂತಿ ಕಾಪಾಡುವಲ್ಲಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ.

ಅಧ್ಯಾಪಕ-ಅಧ್ಯಾಪಕಿ, ವಿದ್ಯಾರ್ಥಿ-ವಿದ್ಯಾರ್ಥಿನಿಯರು ಹಾಗೂ ಯುವಕ-ಯುವತಿಯರನ್ನು ಸಂಘಟಿಸಿ ಆದರ್ಶ ನಾಗರಿಕರನ್ನಾಗಲು ಅವರಲ್ಲಿ ರಾಷ್ಟ್ರಭಕ್ತಿ, ರಾಷ್ಟ್ರೀಯ ಭಾವೈಕ್ಯತೆ, ಸಂಯಮ, ಧೈರ್ಯ, ಸ್ವಾರ್ಥರಹಿತ ಜೀವನ, ಸರಳ ಜೀವನ ಸೇವಾ ಮನೋಭಾವನೆ, ಸೌಹಾರ್ದತೆಯನ್ನು ಮೂಡಿಸುವುದು, ಸಾಕ್ಷರತಾ ಆಂದೋಲನದಲ್ಲಿ ಭಾಗವಹಿಸುವುದು, ಶಾಲೆಗೆ ಹೋಗದ ಮಕ್ಕಳನ್ನು ಶಾಲೆಗೆ ಸೇರಿಸುವುದು, ವಯಸ್ಕರಿಗೆ ಸಾಕ್ಷರತೆ ನೀಡುವುದು, ಗ್ರಾಮೀಣ ಪ್ರದೇಶಗಳಲ್ಲಿ ಸ್ವಚ್ಛತೆಯನ್ನು ಕಾಪಾಡಲು ಶ್ರಮದಾನ ಶಿಬಿರಗಳನ್ನು ನಡೆಸುವುದು ಭಾರತ ಸೇವಾದಲದ ಉದ್ದೇಶಗಳಾಗಿವೆ.



ಭಾರತ ಸೇವಾದಲ ಎಂದೊಡನೆ ನೆನಪಿಗೆ ಬರುವ ಹೆಸರು- ಇದರ ಸಂಸ್ಥಾಪಕ, ಕನ್ನಡಿಗ ನಾರಾಯಣ್ ಸುಬ್ಬರಾವ್ ಹರ್ಡಿಕರ್. ಮನದಲ್ಲಿ ನಾಡಿಗಾಗಿ ಸೇವೆ ಸಲ್ಲಿಸುವ ಹಂಬಲದಿಂದ 1913ರಲ್ಲಿ ಇವರು ವೈದ್ಯಕೀಯ ಪದವಿ ಪಡೆದು ಡಾ. ನಾ.ಸು. ಹರ್ಡಿಕರ್ ಆದರು.

ಸಂಘಟನೆ ಹರ್ಡಿಕರ್ ಅವರಲ್ಲಿದ್ದ ಸ್ವಾಭಾವಿಕ ಗುಣ. ಹರ್ಡಿಕರ್ ಅವರು ಹಿಂದೂಸ್ತಾನಿ ಸೇವಾದಲದ ಪ್ರಥಮ ಕೇಂದ್ರವನ್ನು ಕರ್ನಾಟಕದ ಬಾಗಲಕೋಟೆ ಬಳಿಯ ಸೀತಿಮತ್ತಿ ಎಂಬ ನದಿ ತೀರದ ಗ್ರಾಮದಲ್ಲಿ ಸ್ಥಾಪಿಸಿದರು.

ಒಂದು ಕಾಲದಲ್ಲಿ ಕಾಂಗ್ರೆಸ್‌ನ ಮೇಲೆ ಇದ್ದ ಪ್ರತಿಬಂಧಕ ಆಜ್ಞೆಯನ್ನು ಬ್ರಿಟಿಷ್ ಸರ್ಕಾರ ಹಿಂದಕ್ಕೆ ತೆಗೆದುಕೊಂಡಿತ್ತು. ಆದರೆ ಸೇವಾದಲದ ಮೇಲಿನ ಆಜ್ಞೆಯನ್ನು ಹಿಂತೆಗೆದುಕೊಂಡಿರಲಿಲ್ಲ. ಈ ಸಂಘಟನೆಯ ಪ್ರಭಾವ ಮತ್ತು ಪ್ರಾಬಲ್ಯತೆ ಹೇಗಿತ್ತು ಎಂಬುದು ಇದರಿಂದ ತಿಳಿಯುತ್ತದೆ.

1950ನೇ ಮಾರ್ಚ್ 16ರಂದು ಬೇಲೂರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಕಾಂಗ್ರೆಸ್ ಎಂಬ ಪದವನ್ನು ಕಳಚಿಕೊಂಡು ಭಾರತ ಸೇವಾದಲ ಎಂಬ ಹೊಸ ಸ್ವರೂಪ ಪಡೆಯಿತು.

ಉದಯವಾಣಿ
ಮಂಗಳವಾರ 18 ಡಿಸೆಂಬರ್ 2007

# ಆರೋಗ್ಯ ತಪಾಸಣಾ ಶಿಬಿರ



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆ ಹಾಗೂ ಬೆಂಗಳೂರಿನ ಮಾಧವನಗರ ಲಯನ್ಸ್ ಕ್ಲಬ್‌ಗಳ ಸಂಯುಕ್ತ ಆಶ್ರಯದಲ್ಲಿ ಇತ್ತೀಚೆಗೆ ಶೇಷಾದ್ರಿಪುರ ಕಾಲೇಜಿನಲ್ಲಿ ಉಚಿತ ಆರೋಗ್ಯ ತಪಾಸಣಾ ಶಿಬಿರ ನೆರವೇರಿತು. ಶಿಬಿರದಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಮಾಜಿ ಮೇಯರ್ ಕೆ.ಎಂ. ನಂಜಪ್ಪ, ಲಯನ್ಸ್ ಅಧ್ಯಕ್ಷ ನಂಜುಂಡಪ್ಪ, ಡಾ। ಎಚ್.ಕೆ. ನಾಗರಾಜ್ ಮೊದಲಾದವರು ಈ ಸಂದರ್ಭದಲ್ಲಿ ಹಾಜರಿದ್ದರು.

'ಪ್ರಜಾಪ್ರಗತಿ' ಕನ್ನಡ ದಿನಪತ್ರಿಕೆ
ದಿನಾಂಕ 18, ನವೆಂಬರ್ 2007 ಭಾನುವಾರ



# ಶೀಲವಿಲ್ಲದ ಶಿಕ್ಷಣ ದುರ್ಮಾರ್ಗಕ್ಕೆ ಕಾರಣ

**ಶಿರಾ**

ಶೀಲವಿಲ್ಲದ ಶಿಕ್ಷಣ ಇಂದು ಇಡೀ ದೇಶವನ್ನೇ ಕಾಡುತ್ತಿದೆ ಪ್ರಸ್ತುತ ರಾಜ್ಯದ ಆಡಳಿತ ಕೆಟ್ಟು ಕೂತಿರುವುದೇ ಶೀಲವಿಲ್ಲದ ಶಿಕ್ಷಣದಿಂದ ಸಮಾಜ ಸೇವೆಗೆಂದು ರಾಜ್ಯದ ಆಡಳಿತದ ಚುಕ್ಕಾಣಿ ಹಿಡಿದು ಬಹುತೇಕ ಧುರೀಣರು ಮೊದಲು ರಾಜಕೀಯದ ದೀಕ್ಷೆ ಪಡೆಯಬೇಕು. ರಾಜ ಕಾರಣಿಗಳೂ ಕೂಡ ದುರ್ಮಾರ್ಗರಾದರೆ ಅದಕ್ಕೆ ಶೀಲವಿಲ್ಲದ ಶಿಕ್ಷಣವೇ ಕಾರಣ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್. ದೊರೆಸ್ವಾಮಿ ಅಭಿಪ್ರಾಯಪಟ್ಟರು.

ಪಟ್ಟಣದ ಸರ್ಕಾರಿ ಪ.ಪೂ. ಕಾಲೇಜಿನಲ್ಲಿ ಗಾಂಧಿಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಕೆ.ಆರ್.ಎಸ್. ಪ್ರತಿಷ್ಠಾನ ಇವರ ಸಂಯುಕ್ತಾಶ್ರಯದಲ್ಲಿ ಶನಿವಾರ ನಡೆದ ಗಾಂಧಿ ವಿಚಾರ ಪ್ರಚಾರ ಸಮಾವೇಶದಲ್ಲಿ ದುಡಿಮೆ ಇಲ್ಲದ ಸಂಪತ್ತು ಎಂಬ ವಿಚಾರವಾಗಿ ಕಾಲೇಜು ವಿದ್ಯಾರ್ಥಿಗಳಿಗೆ ಉಪನ್ಯಾಸ ನೀಡಿ ಅವರು ಮಾತನಾಡುತ್ತಿದ್ದಾರು.

ಶೀಲವೆಂಬುದು ಜೀವನದ ಒಂದು ದಿಕ್ಸೂಚಿ ಇದ್ದಂತೆ. ಶೀಲದ ಬಗೆಗಿನ ಹೆಚ್ಚಿನ ಸ್ವಭಾವ ವಿದ್ಯಾರ್ಥಿಗಳಲ್ಲಿ ಮಾಡಬೇಕು ಸಮಾಜ ಎಂದಿಗೂ ಅಶ್ಲೀಲವಾಗಬಾರದು.

ಪ್ರತಿಯೊಬ್ಬರಲ್ಲೂ ಕ್ರೂಡಿಕೃತಗೊಂಡ ಸಂಪತ್ತು ದುಡಿಮೆಯಿಂದ ಸ್ವೀಕರಿಸಿದ್ದಾಗಿರಬೇಕೆ ಹೊರತು, ಅದು ಅನ್ಯ ಮಾರ್ಗದಿಂದ ಸಂಪಾದಿಸಿದ ಹಣ ಆಗಿರಬಾರದು. ದುಡಿಮೆ ಇಲ್ಲದ ಸಂಪತ್ತು ಅದು ಸಂಪತ್ತೇ ಅಲ್ಲ, ಆ ರೀತಿ ಸಂಗ್ರಹಿಸಿದ ಸಂಪತ್ತು ಇಡೀ ದೇಶಕ್ಕೆ ಆಪತ್ತು ಎಂದು ದೊರೆಸ್ವಾಮಿ ತಿಳಿಸಿದರು.

ಸಮಾರಂಭದ ಉದ್ಘಾಟನೆ ನೆರವೇರಿಸಿದ ಶಿಕ್ಷಣ ತಜ್ಞ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ವೊಡೇ ಪಿ. ಕೃಷ್ಣ ಮಾತನಾಡಿ, ಗಾಂಧಿಜಿಯವರ ತ್ಯಾಗ ಬಲಿದಾನಗಳಿಂದಾಗಿ ದೇಶದ ಜನರ ಬದುಕು ಹಸನಾಗಿದೆ ಎಂದರು.

ಗಾಂಧಿವಾದಿ ಹಾಗೂ ಲೇಖಕ ಎಲ್.ನರಸಿಂಹಯ್ಯ, ಬಾ ಮತ್ತು ಬಾಪೂ ಎಂಬ ವಿಚಾರವಾಗಿ ಉಪನ್ಯಾಸ ನೀಡಿ ಮಾತನಾಡುತ್ತಾ ಮಾತೃತ್ವ ಎಂಬುದು ಎಲ್ಲಾ ಮೌಲ್ಯಗಳ ಅಡಿಗಲ್ಲು, ಈ ಅಡಿಗಲ್ಲಿಗೆ ಭದ್ರ ಬುನಾದಿ ಆಗತ್ಯ ಇಲ್ಲದಿದ್ದಾರೆ ಜೀವನವೇನಶ್ವರ ಎಂದ ಅವರು ಗಾಂಧಿಯವರ ಜೀವನದ ಆದರ್ಶಕ್ಕೆ ಅವರ ಧರ್ಮಪತ್ನಿಯ ಪಾತ್ರವೂ ಇತ್ತು ಎಂದರು.

ಕ್ಷೇತ್ರದ ಶಾಸಕ ಬಿ. ಸತ್ಯನಾರಾಯಣ್ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದರು, ಪ್ರೊ॥ ಹೆಚ್.ಆರ್. ದಾಸೇಗೌಡ, ಸಿದ್ಧಾರ್ಥಶರ್ಮ, ಪ್ರಾಂಶುಪಾಲ ಅಶೋಕ್ ಕುಮಾರ್, ಕೋದಂಡರಾಮ್, ಕೃಷ್ಣ, ಹೆಚ್.ರಾಮಪ್ಪ, ಮಹೇಂದ್ರಪ್ಪ ಮುಂತಾದವರು ಉಪಸ್ಥಿತರಿದ್ದರು.

'ಪ್ರಜಾಪ್ರಗತಿ' ಕನ್ನಡ ದಿನಪತ್ರಿಕೆ.

ದಿನಾಂಕ 18, ನವೆಂಬರ್ 2007 ಭಾನುವಾರ



ಶಿರಾ ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಶನಿವಾರ ಏರ್ಪಡಿಸಲಾಗಿದ್ದ ಗಾಂಧಿ ವಿಚಾರ ಪ್ರಚಾರ ಸಮಾವೇಶವನ್ನು ಶಿಕ್ಷಣ ತಜ್ಞ ಹಾಗೂ ಗಾಂಧಿ ವಿಚಾರ ಪ್ರಚಾರ ಸಮಾವೇಶವನ್ನು ಶಿಕ್ಷಣ ತಜ್ಞ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಉದ್ಘಾಟಿಸಿದರು. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್. ದೊರೆಸ್ವಾಮಿ, ಶಾಸಕ ಬಿ. ಸತ್ಯನಾರಾಯಣ್, ಎಲ್. ನರಸಿಂಹಯ್ಯ, ಪ್ರಾಂಶುಪಾಲ ಅಶೋಕ್ ಕುಮಾರ್ ಹಾಜರಿದ್ದರು.

ಸಂಜೆ ವಾಣಿ

ಶನಿವಾರ 17 ನವೆಂಬರ್ 2007



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಮತ್ತು ಭಾರತ ಸೇವಾದಲದ ಸಂಯುಕ್ತ ಆಶ್ರಯದಲ್ಲಿ ನಗರದ ಬಿ.ಆರ್.ವಿ ಮೈದಾನದಲ್ಲಿ ನಡೆದ "ಪ್ರಕೃತಿ ವಿಕೋಪ ಪರಿಹಾರದ ಛಾಯಾಚಿತ್ರ ಪ್ರದರ್ಶನ"ವನ್ನು ಹೈಕೋರ್ಟ್ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಉದ್ಘಾಟಿಸಿದರು. ರೆಡ್ ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಸೇವಾದಲದ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ಮತ್ತಿತರರು ಉಪಸ್ಥಿತರಿದ್ದರು.

ಕ್ರೀಡೆ | ಪ್ರಜಾವಾಣಿ

ಸೋಮವಾರ 12ನೇ ನವೆಂಬರ್ 2007



ಆರ್‌ಬಿಎ ಕಾಲೇಜ್ ಮೈದಾನದಲ್ಲಿ ಇತ್ತೀಚೆಗೆ ನಡೆದ ಬೆಂಗಳೂರು ವಿಶ್ವವಿದ್ಯಾಲಯ ಅಂತರ ಕಾಲೇಜ್ ನೆಟ್‌ಬಾಲ್ ಟೂರ್ನಿ ಪುರುಷರ ವಿಭಾಗದ ಪ್ರಶಸ್ತಿ ಗೆದ್ದುಕೊಂಡ ಶೇಷಾದ್ರಿಪುರ ಕಾಲೇಜ್ ತಂಡ. ಕುಳಿತವರು (ಎಡದಿಂದ) ಎಲ್. ಪ್ರತಾಪ್ (ಕೋಚ್), ಟಿ.ವಿ. ಸರಸ್ವತಿ (ದೈಹಿಕ ಶಿಕ್ಷಣ ನಿರ್ದೇಶಕರು), ಪ್ರೊ. ಎಸ್. ಎನ್. ದೂರ್ವರಾಜ್ (ಪ್ರಾಂಶುಪಾಲರು), ವೂಡೆ ಪಿ. ಕೃಷ್ಣ (ಪ್ರಧಾನ ಕಾರ್ಯದರ್ಶಿ, ಎಸ್‌ಇಟಿ), ಎಸ್. ನವೀನ್ (ನಾಯಕ), ಡಾ. ಧನಪಾಲ್ (ಕ್ರೀಡಾ ಕಾರ್ಯದರ್ಶಿ). ನಿಂತವರು: ಬಿ.ಟಿ. ರವಿಕುಮಾರ್, ಅರುಣ್, ಕಾರ್ತಿಕ್, ಬಿ. ಚೇತನ್, ಪೃಥ್ವಿರಾಜ್, ವಿ. ರೂಪೇಶ್, ಅಶ್ವಿನ್, ಡಿ. ಸಾತ್ವಿಕ್

ವಿಜಯ ಕರ್ನಾಟಕ, ಬೆಂಗಳೂರು
ಮಂಗಳವಾರ 30 ಅಕ್ಟೋಬರ್ 2007

C

# ಉದ್ಯಾನ ನಗರಿ

# ರಾಜಕೀಯ ಮಾಡಲು ಬಂದಿಲ್ಲ



ಬೆಂಗಳೂರು, ಅ. 29- 'ನಿಗದಿತ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ನಗರಕ್ಕೆ ಬಂದಿರುವೆನೇ ಹೊರತು ಕರ್ನಾಟಕದಲ್ಲಿನ ಸದ್ಯದ ರಾಜಕೀಯದಲ್ಲಿ ಕೈಯಾಡಿಸಲು ಆಗಮಿಸಿಲ್ಲ' ಎಂದು ಮಹಾರಾಷ್ಟ್ರ ರಾಜ್ಯಪಾಲ ಎಸ್.ಎಂ. ಕೃಷ್ಣ ಸ್ಪಷ್ಟಪಡಿಸಿದ್ದಾರೆ.

ಸಾಹಿತಿ ಡಾ. ಪಾಂಡುಕುಮಾರ್ ಅವರು ಬರೆದ '1600 ವರ್ಷಗಳ ಒಕ್ಕಲಿಗರ ಇತಿಹಾಸ' ಗ್ರಂಥವನ್ನು ನಗರದಲ್ಲಿ ಸೋಮವಾರ ಬಿಡುಗಡೆ ಮಾಡಿ, ರಾಜ್ಯ ರಾಜಕೀಯದಲ್ಲಿ ಹಸ್ತಕ್ಷೇಪ ಮಾಡಲು ಬಂದಿದ್ದಾರೆ ಎನ್ನುವ ದೇವೇಗೌಡರ ಟೀಕೆಗೆ ತಿರುಗೇಟು ನೀಡಿದರು.

'ನಾನು ಮಹಾರಾಷ್ಟ್ರದ ರಾಜ್ಯಪಾಲನಾದ ಮೇಲೆ ಕರ್ನಾಟಕಕ್ಕೆ ಎಷ್ಟು ಸಲ ಬಂದು ಹೋಗುತ್ತಿದ್ದೇನೆ ಎಂಬುದನ್ನು ಕೆಲವರು ಲೆಕ್ಕಹಾಕಿಕೊಂಡು ಕುಳಿತಿದ್ದಾರೆ. ಈ ರೀತಿ ಕೀಳು ಮಟ್ಟದ ರಾಜಕೀಯ ಲೆಕ್ಕಾಚಾರ ಮಾಡುವ ಬಹಳ ಮಂದಿ ಇದ್ದಾರೆ. ಆದರೆ, ನಾನು ಮೊದಲೇ ನಿಗದಿಯಾಗಿದ್ದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಬೆಂಗಳೂರಿಗೆ ಮೂರು ದಿನಗಳ ಹಿಂದೆ ಬಂದಿದ್ದೇನೆ. ಕಾರ್ಯಕ್ರಮ ಮುಗಿದ ಮೇಲೆ ಒಂದು ಕ್ಷಣವೂ ಇಲ್ಲಿ ಇರುವುದಿಲ್ಲ. ಈ ರಾತ್ರಿಯೇ ವಿಮಾನವೇರಿ ಮುಂಬಯಿಗೆ ತೆರಳುತ್ತೇನೆ. ಮುಂದೆ ಇಂಥ ಎಷ್ಟೇ ಕಾರ್ಯಕ್ರಮಗಳಿಗೆ ಆಹ್ವಾನಿಸಿದರೂ ಬಂದು ಭಾಗವಹಿಸಿ ಹೋಗುತ್ತೇನೆ' ಎಂದು ಹೇಳಿದರು.

ಒಕ್ಕಲಿಗರು ಸಹಸ್ರ ವರ್ಷಗಳ ಇತಿಹಾಸ ಹೊಂದಿರುವ ಜನಾಂಗದವರು. ಆದರೆ ಈ ದೊಡ್ಡ ಸಮುದಾಯ ಬೇರೆ ಬೇರೆ ಒಳ ಪಂಗಡಗಳ ಹೆಸರಿನಲ್ಲಿ ಪ್ರತ್ಯೇಕಗೊಂಡಿವೆ. ಅವುಗಳನ್ನು ಒಂದೆಡೆ ಸೇರಿಸುವ ಕೆಲಸ ಆಗಬೇಕು. ಚರಿತ್ರೆಯನ್ನು ಊಹಿಸಿ ಬರೆಯಲು ಸಾಧ್ಯವಿಲ್ಲ. ಒಕ್ಕಲಿಗ ಸಮುದಾಯದ ಪರಂಪರೆಯ ಸಮಗ್ರ ಮಾಹಿತಿ ನೀಡುವಲ್ಲಿ ಪಾಂಡು ಕುಮಾರ್ ಅವರ '1600 ವರ್ಷಗಳ ಒಕ್ಕಲಿಗರ ಇತಿಹಾಸ' ಗ್ರಂಥ ಯಶಸ್ವಿಯಾಗಿದೆ ಎಂದು ಅಭಿಪ್ರಾಯಪಟ್ಟರು.

ಆದಿಚುಂಚನಗಿರಿ ಮಠದ ಶ್ರೀ ಸೌಮ್ಯನಾಥ ಸ್ವಾಮೀಜಿ, ಗುರು ಗುಂಡ ಬ್ರಹ್ಮೇಶ್ವರ ಮಠದ ಶ್ರೀ ನಂಜಾವಧೂತ ಸ್ವಾಮೀಜಿ, ಶಾಸಕ ಕೆ.ಬಿ. ಮುನಿವೆಂಕಟರೆಡ್ಡಿ, ನಾರಾಯಣ ನೇತ್ರಾಲಯದ ಡಾ. ಭುಜಂಗ ಶೆಟ್ಟಿ, ಹಿರಿಯ ಸಾಹಿತಿ ಜಿ. ನಾರಾಯಣ, ದಯಾನಂದ ಸಾಗರ್ ವಿದ್ಯಾಸಂಸ್ಥೆ ಡಾ. ಹೇಮಚಂದ್ರ ಸಾಗರ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಡಬ್ಲ್ಯು.ಪಿ. ಕೃಷ್ಣ ಉಪಸ್ಥಿತರಿದ್ದರು.

ಉದಯವಾಣಿ
ಮಂಗಳವಾರ 30 ಅಕ್ಟೋಬರ್ 2007

# ಒಕ್ಕಲಿಗ ಒಳಪಂಗಡಗಳು ಒಂದೇ ಚಾಮರದಡಿ ಬರಲಿ



ಬೆಂಗಳೂರು, ಅ. 29: ಒಕ್ಕಲಿಗರಲ್ಲಿ ಹತ್ತಾರು ಒಳ ಪಂಗಡಗಳಿದ್ದು ಅವೆಲ್ಲವನ್ನೂ ಒಂದೇ ಚಾಮರದಡಿ ತರುವ ಕೆಲಸವನ್ನು ಸಮುದಾಯದ ಪ್ರಾತಿನಿಧಿಕ ಸಂಸ್ಥೆಗಳು ಮಾಡಬೇಕಿದೆ ಎಂದು ಮಹಾರಾಷ್ಟ್ರ ರಾಜ್ಯಪಾಲ ಎಸ್.ಎಂ. ಕೃಷ್ಣ ಇಂದು ಹೇಳಿದರು.

ಡಾ॥ ಬಿ. ಪಾಂಡುಕುಮಾರ್ ಬರೆದ '1600 ವರ್ಷಗಳ ಒಕ್ಕಲಿಗರ ಇತಿಹಾಸ' ಕೃತಿ ಬಿಡುಗಡೆ ಮಾಡಿ ಮಾತನಾಡಿದರು. ಐಟಿ-ಬಿಟಿ ಯುಗದಲ್ಲಿ ಮಾನವ ಎಲ್ಲೆಡೆ ಲಗ್ಗೆ ಹಾಕುತ್ತಿದ್ದು ನಾವು ನಿರ್ಲಿಪ್ತರಾಗಿ ಕೂರುವುದು ಸರಿಯೇ ಎಂಬ ಪ್ರಶ್ನೆ ಸ್ವಾಭಾವಿಕ. ಇಂತಹ ಸಂದರ್ಭದಲ್ಲಿ ಜನಾಂಗದ ಚರಿತ್ರೆಯನ್ನು ಬರೆದು ದೇಶಕ್ಕೆ ಕೊಡುಗೆ ನೀಡಿದ್ದನ್ನು ಇಲ್ಲಿ ದಾಖಲಿಸುವ ಮಹತ್ಕಾರ್ಯ ನಡೆದಿದೆ ಎಂದರು.

ಒಕ್ಕಲಿಗ ನೇಗಿಲಯೋಗಿ ಮಾತ್ರವಲ್ಲ. ರಾಜ್ಯ ಕಟ್ಟಿದ್ದಾನೆ, ನೂರಾರು ವರ್ಷ ಪ್ರಜಾ ರಕ್ಷಕನಾಗಿ ಆಳಿದ್ದಾನೆ. ಒಂದು ಕಾಲದಲ್ಲಿ ನೇಪಾಳ, ಒರಿಸ್ಸಾ, ಬಾಂಗ್ಲಾವನ್ನು ತನ್ನ ತೆಕ್ಕೆಯಲ್ಲಿ ತೆಗೆದುಕೊಂಡಿದ್ದಾನೆ. ಕೋಟೆ ಕೊತ್ತಲ, ಕೆರೆಕಟ್ಟೆ, ರಸ್ತೆ ಸಾಲುಮರ ನೆಟ್ಟಿದ್ದಾನೆ. ಎಲ್ಲಕ್ಕಿಂತ ಮುಖ್ಯವಾಗಿ ಪ್ರಜೆಗಳನ್ನು ಆದರ್ಶಪ್ರಾಯವಾಗಿ ನಡೆಸಿಕೊಂಡಿದ್ದಾನೆಂಬುದನ್ನು ಕೃತಿ ತೆರೆದು ತೋರಿಸಿದೆ ಎಂದು ಹೇಳಿದರು.

ಕಾಲಗರ್ಭದಲ್ಲಿ ಹುದುಗಿರುವ ಏಳುಬೀಳುಗಳನ್ನು ಕ್ಷಕಿರಣ ಮಾಡಿ, ಲಭ್ಯವಿರುವ ಮಾಹಿತಿ ಕಲೆಹಾಕಿ ಕೊಡುವುದು ಕಷ್ಟದ ಕೆಲಸ. ಅಗಾಧ ತಾಳ್ಮೆ, ಮಾಹಿತಿಗಾಗಿ ವಿವಿಧ ಮೂಲಗಳ ನೀಳ ಮನನ. ಅಗತ್ಯವೆನಿಸಿದಾಗ ಶಾಸನ, ವೀರಗಲ್ಲು, ತಾಳೆಗರಿ ಓದಿ ಅರ್ಥ ಮಾಡಿಕೊಳ್ಳುವ ಅರ್ಹತೆ ಇವೆಲ್ಲಾ ಚರಿತ್ರೆಕಾರನಿಗೆ ಬೇಲು. ಈ ಕೃತಿಯನ್ನು ಬರೆದ ಪಾಂಡುಕುಮಾರ್ ತಮ್ಮ ಶಕ್ತಿಯನ್ನು ತೋರಿಸಿದ್ದಾರೆ ಎಂದರು.

ಒಕ್ಕಲಿಗ ಜನಾಂಗದ ರಾಜ್ಯದ ಪರವಾಗಿ ನಡೆಸಿದ ಹೋರಾಟ, ಮಠಮಾನ್ಯಗಳ ಕೊಡುಗೆಯ ಬಗ್ಗೆ ಒಳನೋಟ, ರಾಜಕೀಯಕ್ಕೆ ನಮ್ಮ ಜನಾಂಗ ನೀಡಿರುವ ಕೊಡುಗೆ ನಗಣ್ಯವಲ್ಲ ಎಂದು ಹೇಳುವ ಚಾರಿತ್ರಿಕ ದಾಖಲೆಯಾಗಿ ಈ ಪುಸ್ತಕವಿದೆ ಎಂದು ಕೃಷ್ಣ ಹೇಳಿದರು.

ವಿಶ್ವ ಒಕ್ಕಲಿಗರ ಮಠದ ಶ್ರೀ ಕುಮಾರ ಚಂದ್ರಶೇಖರ ನಾಥ ಸ್ವಾಮೀಜಿ, ಪಟ್ಟನಾಯಕನಹಳ್ಳಿ ಗುರುಗುಂಡ ಬ್ರಹ್ಮೇಶ್ವರ ಮಠದ ಶ್ರೀ ನಂಜಾವಧೂತ ಸ್ವಾಮೀಜಿ, ಆದಿಚುಂಚನಗಿರಿ ಬೆಂಗಳೂರು ಶಾಖಾ ಮಠದ ಶ್ರೀ ಸೌಮ್ಯನಾಥ ಸ್ವಾಮೀಜಿ ಸಾನಿಧ್ಯ ವಹಿಸಿದ್ದರು.

ನಾಡೋಜ ಜಿ.ನಾರಾಯಣ, ರಾಜ್ಯ ಒಕ್ಕಲಿಗರ ಸಂಘದ ಅಧ್ಯಕ್ಷ ಡಾ.ಸಿ.ವಿಠ್ಠಲ್, ಶಾಸಕ ಕೆ.ಬಿ. ವೆಂಕಟರೆಡ್ಡಿ, ನಾರಾಯಣ ನೇತ್ರಾಲಯದ ಡಾ. ಭುಜಂಗ ಶೆಟ್ಟಿ, ದಯಾನಂದ ಸಾಗರ ಸಂಸ್ಥೆಯ ಡಾ. ಹೇಮಚಂದ್ರ ಸಾಗರ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಡಬ್ಲ್ಯೂ.ಪಿ. ಕೃಷ್ಣ, ಅಮೆರಿಕ ಒಕ್ಕಲಿಗರ ಪರಿಷತ್‌ನ ಕೆ. ಜಯದೇವ್ ಮೊದಲಾದವರು ಉಪಸ್ಥಿತರಿದ್ದರು.

ಉಪನ್ಯಾಸಕ ಟಿ. ಕೃಷ್ಣ ಪುಸ್ತಕ ಪರಿಚಯ ಮಾಡಿಕೊಟ್ಟರು. ಲೇಖಕ ಡಾ. ಬಿ. ಪಾಂಡುಕುಮಾರ್ ಎಲ್ಲರನ್ನೂ ಸ್ವಾಗತಿಸಿದರು.

ವಿಜಯ ಕರ್ನಾಟಕ, ಬೆಂಗಳೂರು
ಭಾನುವಾರ 28 ಅಕ್ಟೋಬರ್ 2007

# ಗ್ರಂಥ ಲೋಕಾರ್ಪಣ 29ಕ್ಕೆ

ಬೆಂಗಳೂರು, ಅ.27- ಡಾ. ಬಿ. ಪಾಂಡುಕುಮಾರ್ ವಿರಚಿತ '1600 ವರ್ಷಗಳ ಒಕ್ಕಲಿಗರ ಇತಿಹಾಸ' ಕೃತಿಯನ್ನು ಅ.29 ರಂದು ನಗರದಲ್ಲಿ ಗ್ರಂಥ ಲೋಕಾರ್ಪಣ ಸಮಿತಿ ಬಿಡುಗಡೆಗೊಳಿಸಲಿದೆ.

ಸೆಂಟ್ರಲ್ ಕಾಲೇಜು ಆವರಣದ ಜ್ಞಾನಜ್ಯೋತಿ ಸಭಾಂಗಣದಲ್ಲಿ ಅಂದು ಸಂಜೆ 5.30 ಕ್ಕೆ ನಡೆಯಲಿರುವ ಕಾರ್ಯಕ್ರಮದಲ್ಲಿ ಮಹಾರಾಷ್ಟ್ರದ ರಾಜ್ಯಪಾಲ ಎಸ್.ಎಂ. ಕೃಷ್ಣ ಕೃತಿ ಬಿಡುಗಡೆ ಮಾಡುವರು ಎಂದು ಸಮಿತಿಯ ಸಂಚಾಲಕ ಡಾ. ಎಂ.ಕೆ. ಪುರುಷೋತ್ತಮ ಪತ್ರಿಕಾಗೋಷ್ಠಿಯಲ್ಲಿ ಶನಿವಾರ ತಿಳಿಸಿದರು.

ಆದಿಚುಂಚನಗಿರಿ ಸಂಸ್ಥಾನದ ಪೀಠಾಧ್ಯಕ್ಷ ಬಾಲಗಂಗಾಧರನಾಥ ಸ್ವಾಮೀಜಿ, ವಿಶ್ವ ಒಕ್ಕಲಿಗರ ಮಠದ ಪೀಠಾಧ್ಯಕ್ಷ ಕುಮಾರ ಚಂದ್ರಶೇಖರನಾಥ ಸ್ವಾಮೀಜಿ ಮತ್ತು ಪಟ್ಟನಾಯಕನಹಳ್ಳಿ ಮಠದ ಪೀಠಾಧ್ಯಕ್ಷ ನಂಜಾವಧೂತ ಸ್ವಾಮೀಜಿ ಸಾನ್ನಿಧ್ಯವಹಿಸಲಿದ್ದಾರೆ. ಮಾಜಿ ಸಚಿವ ಎಂ. ಚಂದ್ರಶೇಖರ್, ನಾಡೋಜ ಜಿ. ನಾರಾಯಣ, ರಾಜ್ಯ ಒಕ್ಕಲಿಗರ ಸಂಘದ ಅಧ್ಯಕ್ಷ ಡಾ. ಸಿ. ವಿಠ್ಠಲ್, ಸುಳ್ಯ-ಪುತ್ತೂರಿನ ಕೆ.ವಿ.ಜಿ. ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ಕುರಂಜಿ ವೆಂಕಟರಮಣಗೌಡ, ಶಾಸಕ ಕೆ.ಬಿ. ಮುನಿವೆಂಕಟ ರೆಡ್ಡಿ, ನಾರಾಯಣ ನೇತ್ರಾಲಯದ ಡಾ. ಭುಜಂಗ ಶೆಟ್ಟಿ, ದಯಾನಂದ ಸಾಗರ್ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ಡಾ. ಹೇಮಚಂದ್ರ ಸಾಗರ್, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಮತ್ತು ಅಮೆರಿಕ ಒಕ್ಕಲಿಗರ ಪರಿಷತ್‌ನ ಮಹಾ ಪೋಷಕ ಕೆ. ಜಯದೇವ್ ಭಾಗವಹಿಸಲಿದ್ದಾರೆ ಎಂದರು.

ಒಕ್ಕಲುತನದ ಇತಿಹಾಸ, ರಾಜಮನೆತನಗಳು, ಸಂಘದ ಹುಟ್ಟು ಮತ್ತು ಬೆಳವಣಿಗೆ, ಬ್ರಾಹ್ಮಣೇತರ ಚಳವಳಿ ಮತ್ತು ಹಿಂದುಳಿದ ವರ್ಗಗಳ ಆಯೋಗಗಳು, ಸ್ವಾತಂತ್ರ್ಯ ಹೋರಾಟದಲ್ಲಿ ಜನಾಂಗದ ಪಾತ್ರ, ಸ್ವಾತಂತ್ರ್ಯಾ ನಂತರ ರಾಜ್ಯ ರಾಜಕೀಯದಲ್ಲಿ ಜನಾಂಗ, ಸಾಮಾಜಿಕ ಬದಲಾವಣೆಯಲ್ಲಿ ಒಕ್ಕಲಿಗರ ಪಾತ್ರ, ನಾಡಿನ ಸಾಹಿತ್ಯ, ಕಲೆ, ಸಂಸ್ಕೃತಿ, ನಾಡು-ನುಡಿಗೆ ಜನಾಂಗದ ಕೊಡುಗೆ ಇತ್ಯಾದಿ ವಿವರಗಳನ್ನೊಳಗೊಂಡ 430 ಪುಟ ಗಳ ಸಂಶೋಧನ ಕೃತಿ ಇದಾಗಿದೆ ಎಂದರು.

ಮರಿಮಲ್ಲಯ್ಯ, ದರ್ಬೆ ಚಂದ್ರಹಾಸ ರೈ ಹಾಗೂ ಲೇಖಕ ಡಾ. ಬಿ. ಪಾಂಡುಕುಮಾರ್ ಉಪಸ್ಥಿತರಿದ್ದರು.

ಈ ಸಂಜೆ

ಭಾನುವಾರ, 14 ಅಕ್ಟೋಬರ್, 2007



ಸುರಾನ ಕಾಲೇಜು ಮತ್ತು ಲಯನ್ಸ್ ಕ್ಲಬ್ ಆಫ್ ಬೆಂಗಳೂರು ದಕ್ಷಿಣ ವತಿಯಿಂದ ನಡೆದ ರಕ್ತದಾನ ಶಿಬಿರವನ್ನು ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಉಪಾಧ್ಯಕ್ಷ ವೂಡೆ ಕೃಷ್ಣ ಉದ್ಘಾಟಿಸಿದರು. ಪ್ರಾಂಶುಪಾಲ ಪ್ರೊ.ಕೆ.ಇ. ರಾಧಾಕೃಷ್ಣ, ಲಯನ್ಸ್ ರಾಜು ಚಂದ್ರಶೇಖರ್ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಶನಿವಾರ, 13 ಅಕ್ಟೋಬರ್ 2007



## ರಕ್ತದಾನ ಶಿಬಿರ

ಸುರಾನಾ ಕಾಲೇಜಿನಲ್ಲಿ ಏರ್ಪಾಡಾಗಿದ್ದ ರಕ್ತದಾನ ಶಿಬಿರದಲ್ಲಿ ಎನ್‌ಸಿಸಿ ಮತ್ತು ಎನ್‌ಎಸ್‌ಎಸ್ ಕೆಡೆಟ್‌ಗಳು ಭಾಗವಹಿಸಿದ್ದರು. ಇಂಡಿಯನ್ ರೆಡ್ ಕ್ರಾಸ್ ಸೊಸೈಟಿಯ ಡಬ್ಲ್ಯು.ಪಿ.ಕೃಷ್ಣ, ಕಾಲೇಜಿನ ಪ್ರಾಂಶುಪಾಲ ಪ್ರೊ|ಕೆ.ಇ.ರಾಧಾಕೃಷ್ಣ ಭಾಗವಹಿಸಿದ್ದರು.

# ಪ್ರಜಾವಾಣಿ

ಬುಧವಾರ

10ನೇ ಅಕ್ಟೋಬರ್ 2007




ಬೆಂಗಳೂರಿನ ಸುರಾನಾ ಕಾಲೇಜು 'ಲಯನ್ಸ್ ಕ್ಲಬ್ ಆಫ್ ಬೆಂಗಳೂರು ದಕ್ಷಿಣ'ದ ಆಶ್ರಯದಲ್ಲಿ ಮಂಗಳವಾರ ನಡೆದ ರಕ್ತದಾನ ಶಿಬಿರದಲ್ಲಿ ಲಯನ್ಸ್ ಕ್ಲಬ್‌ನ ಹರೀಶ್ ಶೆಟ್ಟಿ, ಡಾ. ಸುರೇಶ್ವರಯ್ಯ, ಡಾ.ಲಕ್ಷ್ಮಿಪತಿ, ಐಆರ್‌ಸಿಎಸ್ ಖಜಾಂಚಿ ರಾಜು ಚಂದ್ರಶೇಖರ್, ಭಾರತೀಯ ರೆಡ್‌ಕ್ರಾಸ್ ಸೊಸೈಟಿಯ ಉಪಾಧ್ಯಕ್ಷ ವೂಡೆ ಪಿ.ಕೃಷ್ಣ, ಡಾ. ಡಿ.ಅಯ್ಯಪ್ಪ, ಪ್ರೊ. ಕೆ.ಇ. ರಾಧಾಕೃಷ್ಣ ಮುಂತಾದವರು ಉಪಸ್ಥಿತರಿದ್ದರು.



ಯಲಹಂಕದ ಆರಕೆರೆ ಕಾಲೊನಿಯಲ್ಲಿ ಸೋಮವಾರ ನಡೆದ ಕಾರ್ಯಕ್ರಮದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ.ಪಿ.ಕೃಷ್ಣ ಸಸಿ ನೆಟ್ಟು ನೀರು ಹಾಕಿದರು. ಅರ್ಕಾವತಿ-ಕುಮುದ್ವತಿ ನದಿ ಪುನಶ್ಚೇತನ ಸಮಿತಿಯ ಅಧ್ಯಕ್ಷ ಎಚ್.ಆರ್.ಜಯರಾಂ, ಭಾರತ ಸೇವಾದಲದ ರಾಜ್ಯ ಉಪಾಧ್ಯಕ್ಷ ಬಿ.ಸಿ.ವೆಂಕಟೇಶ್ ಮತ್ತಿತರರು ಚಿತ್ರದಲ್ಲಿದ್ದಾರೆ.

# ಪರಿಸರ ಅರಿವಿನ ಕೊರತೆ: ಕೃಷ್ಣ

ಯಲಹಂಕ: ಪರಿಸರದ ಬಗ್ಗೆ ಎಲ್ಲರಿಗೂ ಜ್ಞಾನವಿದೆಯಾದರೂ ಎಲ್ಲೋ ಒಂದು ಕಡೆ ಅರಿವಿನ ಕೊರತೆಯಿದೆ ಎಂದು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ.ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಭಾರತ ಸೇವಾದಲ ಕೇಂದ್ರ ಸಮಿತಿ ಮತ್ತು ಅರ್ಕಾವತಿ-ಕುಮುದ್ವತಿ ನದಿ ಪುನಶ್ಚೇತನ ಸಮಿತಿ ಇವರ ಸಂಯುಕ್ತ ಆಶ್ರಯದಲ್ಲಿ ಬೆಂಗಳೂರು ಉತ್ತರ ತಾಲ್ಲೂಕಿನ ಆರಕೆರೆ ಕಾಲೊನಿಯಲ್ಲಿ ಆಯೋಜಿಸಿದ್ದ ಸಾಮೂಹಿಕ ಸಸಿ ನೆಡುವ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳು ಪರಿಸರ ಸಂರಕ್ಷಣೆಯಂತಹ ಕಾರ್ಯಕ್ರಮಗಳಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡು ಹಳ್ಳಿಯ ಜನರಲ್ಲಿ ಪರಿಸರದ ಬಗ್ಗೆ ಅರಿವು ಮೂಡಿಸಬೇಕು ಎಂದರು.

ಸಮಿತಿಯ ಜನಾರ್ದನ ಕೆಸರಗದ್ದೆ, ಪರಿಸರ ಸಂರಕ್ಷಣೆಯ ಕಾರ್ಯ ಕೇವಲ ಸರ್ಕಾರ ಹಾಗೂ ಸಂಘ-ಸಂಸ್ಥೆಗಳ ಮಟ್ಟದಲ್ಲಿ ನಡೆಯದೆ ಜನಸಂಘಟನೆಯ ಮೂಲಕ ಆಗಬೇಕಾಗಿದೆ ಎಂದರು.

ಸೇವಾದಲದ ರಾಜ್ಯ ಉಪಾಧ್ಯಕ್ಷ ಬಿ.ಸಿ.ವೆಂಕಟೇಶ್ ಅಧ್ಯಕ್ಷತೆ ವಹಿಸಿದ್ದರು. ಆರಕೆರೆ ಕಾಲೊನಿಯಿಂದ ಗ್ರಾಮದವರೆಗೆ 2000 ಸಸಿಗಳನ್ನು ನೆಡಲಾಯಿತು. ರವೀಂದ್ರ ಸೊರಗಾವಿ ಮತ್ತು ಗಂಗಮ್ಮನ ಒಕ್ಕಲು ತಂಡದವರು ಪರಿಸರದ ಬಗ್ಗೆ ಜಾಗೃತಿ ಮೂಡಿಸುವ ಗೀತೆಗಳನ್ನು ಹಾಡಿದರು.

ಸಮಿತಿಯ ಅಧ್ಯಕ್ಷ ಎಚ್.ಆರ್. ಜಯರಾಂ, ತಾ.ಪಂ.ಸದಸ್ಯ ಮುನಿದಾಸಪ್ಪ, ಹೆಸರಘಟ್ಟ ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷ ಸಿ.ವೆಂಕಟೇಶ್, ಗ್ರಾ.ಪಂ.ಅಧ್ಯಕ್ಷ ಕೆ.ಬಿ.ಮಹದೇವಯ್ಯ, ಮಾಜಿ ಸದಸ್ಯ ಎನ್.ನಾಗರಾಜಗೌಡ, ಸೇವಾದಲದ ಜಿಲ್ಲಾ ಸಂಘಟಕರಾದ ಕಾಶಿನಾಥ ಹಂದ್ರಾಳ, ರಾಣಿ, ತಾಲ್ಲೂಕು ಅಧಿನಾಯಕ ಮಂಜಪ್ಪ, ಜನದನಿ ಸಾಂಸ್ಕೃತಿಕ ಸಂಘಟನೆ ಅಧ್ಯಕ್ಷ ಲಕ್ಕಪ್ಪ ಮತ್ತಿತರರು ಉಪಸ್ಥಿತರಿದ್ದರು.

**ಶಿಕ್ಷಣ ಕಾರ್ಯಕ್ರಮ:** ಅಕ್ಷರ ಜ್ಯೋತಿ ತಾಲ್ಲೂಕು ಸಾಕ್ಷರತಾ ಸಮಿತಿಯ ವತಿಯಿಂದ ಸಾಕ್ಷರತಾ ಮುಂದುವರಿಕೆ ಶಿಕ್ಷಣ ಕಾರ್ಯಕ್ರಮದ ಅಂಗವಾಗಿ ಬೆಂಗಳೂರು ಉತ್ತರ ತಾಲ್ಲೂಕಿನ ನೋಡಲ್ ಮುಂದುವರಿಕೆ ಶಿಕ್ಷಣ ಕೇಂದ್ರದ ಪ್ರೇರಕ-ಸಹಪ್ರೇರಕರಿಗಾಗಿ ಪುನಶ್ಚೇತನ ಕಾರ್ಯಾಗಾರವನ್ನು ತಾಲ್ಲೂಕು ಪಂಚಾಯ್ತಿ ಕಚೇರಿಯಲ್ಲಿ ಸೋಮವಾರ ಆಯೋಜಿಸಲಾಗಿತ್ತು.

ಪ್ರೇರಕರು ಚಟುವಟಿಕೆಯಿಂದ ಕಲಿಕಾ ಕಾರ್ಯವನ್ನು ನಡೆಸಿಕೊಂಡು ಹೋಗುವ ಬಗ್ಗೆ ಲೋಕಶಿಕ್ಷಣ ಇಲಾಖೆಯ ಉಪ ನಿರ್ದೇಶಕ ಕೆ.ಎಲ್.ಪೂಜಾರ್, ಮಾಹಿತಿ ಮತ್ತು ಮಾರ್ಗದರ್ಶನ ನೀಡಿದರು.

ಜಿಲ್ಲಾ ಸಾಕ್ಷರತಾ ಸಮಿತಿಯ ಕಾರ್ಯದರ್ಶಿ ಸ್ವೀಟಿ ಕಲ್ಯಾಂಜಲಿ, ಜಿಲ್ಲಾ ಸಂಯೋಜಕ ಶ್ರೀನಿವಾಸಯ್ಯ, ತಾಲ್ಲೂಕು ಸಂಯೋಜಕ ಎನ್.ಕೆಂಪಯ್ಯ, ಜಂಟಿ ಕಾರ್ಯದರ್ಶಿ ಡಿ.ಸಿ.ಧನಂಜಯ ಮತ್ತಿತರರು ಹಾಜರಿದ್ದರು.

ಈ ಸಂಜೆ
ಭಾನುವಾರ, 07 ಅಕ್ಟೋಬರ್, 2007



ಗಾಂಧಿ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ವೂಡೇ ಪಿ. ಕೃಷ್ಣ, ಭಾರತ ನಿರ್ಮಾಣ ಪ್ರತಿಷ್ಠಾನ ಕಾರ್ಯದರ್ಶಿ ಎಸ್. ವಿ. ಮಂಜುನಾಥ್, ಭಾರತ ಸೇವಾದಳ ಅಧ್ಯಕ್ಷ ಎಚ್. ಎಂ. ಗುರುಸಿದ್ದಸ್ವಾಮಿ, ರಾಜ್ಯ ರೆಡ್ ಕ್ರಾಸ್ ಸಂಸ್ಥೆ ಕೋಶಾಧ್ಯಕ್ಷ ರಾಜುಚಂದ್ರಶೇಖರ್, ರಾಜ್ಯಪಾಲ ರಾಮೇಶ್ವರ್ ಠಾಕೂರ್ ಅವರನ್ನು ಭೇಟಿ ಮಾಡಿ ಗಾಂಧಿ ವಿಚಾರಧಾರೆಯ ಹಿನ್ನೆಲೆಯಲ್ಲಿ ರಾಷ್ಟ್ರದ ಆರ್ಥಿಕ ನೀತಿ ರೂಪಿಸುವಂತೆ ಒತ್ತಾಯಿಸಿ ಮನವಿ ಸಲ್ಲಿಸಿದರು.

ಬೆಂಗಳೂರು ವಿಜಯ

ಶುಕ್ರವಾರ 5 ಅಕ್ಟೋಬರ್ 2007



ಗಾಂಧಿ ಶಾಂತಿ ಪ್ರತಿಷ್ಠಾನದ ನೇತೃತ್ವದಲ್ಲಿ ಗಾಂಧಿವಾದಿಗಳು ರಾಜ್ಯಪಾಲ ರಾಮೇಶ್ವರ್ ಠಾಕೂರ್‌ರನ್ನು ಭೇಟಿ ಮಾಡಿ ಗಾಂಧಿ ವಿಚಾರಧಾರೆಯ ಹಿನ್ನೆಲೆಯಲ್ಲಿ ರಾಷ್ಟ್ರದ ಆರ್ಥಿಕ ನೀತಿ ರೂಪಿಸುವಂತೆ ಒತ್ತಾಯಿಸಿ ಮನವಿ ಪತ್ರ ಸಲ್ಲಿಸಿದರು. ಭಾರತ ನಿರ್ಮಾಣ ಪ್ರತಿಷ್ಠಾನದ ಕಾರ್ಯದರ್ಶಿ ಎಸ್.ವಿ. ಮಂಜುನಾಥ್, ಪ್ರತಿಷ್ಠಾನದ ಪ್ರೊ.ಡೇ. ಪಿ. ಕೃಷ್ಣ, ಭಾರತ ಸೇವಾದಲದ ಎಚ್.ಎಂ. ಗುರುಸಿದ್ಧಸ್ವಾಮಿ, ರೆಡ್‌ಕ್ರಾಸ್ ಸಂಸ್ಥೆಯ ರಾಜು ಚಂದ್ರಶೇಖರ್ ಹಾಜರಿದ್ದರು.

ಸಂಜೆವಾಣಿ
ಗುರುವಾರ 4 ಅಕ್ಟೋಬರ್ 2007



ಬೆಂಗಳೂರಿನ ಗಾಂಧಿ ಪ್ರತಿಷ್ಠಾನದ ವತಿಯಿಂದ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರನ್ನು ಭೇಟಿಯಾಗಿ ಗಾಂಧಿ ವಿಚಾರಧಾರೆಯ ಹಿನ್ನೆಲೆಯಲ್ಲಿ ರಾಷ್ಟ್ರದ ಆರ್ಥಿಕ ನೀತಿ ರೂಪಿಸುವಂತೆ ಒತ್ತಾಯಿಸಿ ಮನವಿ ಸಲ್ಲಿಸಿದರು. ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ. ಕೃಷ್ಣ, ಭಾರತ ಸೇವಾದಳದ ಅಧ್ಯಕ್ಷ ಹೆಚ್.ಎಂ. ಗುರುಸಿದ್ಧಸ್ವಾಮಿ, ರಾಜು, ಚಂದ್ರಶೇಖರ್ ಸೇರಿದಂತೆ ಮತ್ತಿತರಿದ್ದಾರೆ.

ಬೆಂಗಳೂರು ನಗರ

ಮಂಗಳವಾರ 2 ಅಕ್ಟೋಬರ್ 2007



# ಗಾಂಧಿ ಜಯಂತಿ

**ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು:**
ಉಚಿತ ನೇತ್ರ ತಪಾಸಣಾ ಶಿಬಿರ. ಅತಿಥಿಗಳು: ಡಾ.ಸಿ.ಜಿ. ಲಕ್ಷ್ಮೀಪತಿ, ಪಿ. ಕೃಷ್ಣ, ರಾಜು ಚಂದ್ರಶೇಖರ್, ಅಧ್ಯಕ್ಷತೆ: ಕೆ.ಎಂ. ನಂಜಪ್ಪ, ಸ್ಥಳ: ಕಾಲೇಜು ಪ್ರಾಂಗಣ, ಶೇಷಾದ್ರಿಪುರ, ಬೆಳಗ್ಗೆ 8.

**ಗಾಂಧಿ ಶಾಂತಿ ಪ್ರತಿಷ್ಠಾನ:**
ಗಾಂಧಿ ಭವನದಿಂದ ರಾಜಭವನಕ್ಕೆ ಕಾಲ್ನಡಿಗೆ ಜಾಥಾ. ಉಪಸ್ಥಿತಿ: ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ಸಾಹಿತಿ ಯು.ಆರ್. ಅನಂತಮೂರ್ತಿ, ಪಿ. ಕೃಷ್ಣ. ಸಂಜೆ 4.

25-09-2007

ರಾಜ್ಯಪ್ರಗತಿ

# ರಾಜ್ಯಪಾಲರೊಡನೆ ರೆಡ್‌ಕ್ರಾಸ್ ಪದಾಧಿಕಾರಿಗಳು



ರೆಡ್ ಕ್ರಾಸ್‌ನ ರಾಜ್ಯ ಉಪಾಧ್ಯಕ್ಷ ಪ್ರೊ.ಹೆ.ಕೃಷ್ಣ ಮತ್ತು ಗೌ.ಕೋಶಾಧಿಕಾರಿ ರಾಜು ಚಂದ್ರಶೇಖರ್ ಅವರು ಇತ್ತೀಚೆಗೆ ರಾಜಭವನದಲ್ಲಿ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರನ್ನು ಭೇಟಿ ಮಾಡಿದ್ದರು.

ಪ್ರಜಾವಾಣಿ ಬುಧವಾರ 19ನೇ ಸೆಪ್ಟೆಂಬರ್ 2007




ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಿರುವ ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಿ ಹೊಸ ಅವಕಾಶಗಳು ಕುರಿತ ರಾಷ್ಟ್ರೀಯ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ (ಬಲದಿಂದ) ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ, ಜವಾಹರಲಾಲ್ ನೆಹರು ಅತ್ಯಾಧುನಿಕ ವೈಜ್ಞಾನಿಕ ಸಂಶೋಧನಾ ಕೇಂದ್ರದ ಅಧ್ಯಕ್ಷ ಪ್ರೊ.ಎಂ.ಆರ್.ಎಸ್.ರಾವ್, ಕಾಲೇಜಿನ ಉಪಾಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರಾಂಶುಪಾಲ ಡಾ.ಎಂ.ಪ್ರಕಾಶ್ ಭಾಗವಹಿಸಿದ್ದರು.

# ಜೈವಿಕ ತಂತ್ರಜ್ಞಾನ: ಜನರಿಗೆ ಮಾಹಿತಿ ಅಗತ್ಯ

ಯಲಹಂಕ: ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಾಗಿರುವ ಕ್ರಾಂತಿಕಾರಕ ಬೆಳವಣಿಗೆಗಳ ಲಾಭವನ್ನು ಜನರಿಗೆ ತಲುಪಿಸಬೇಕಾದ ಅಗತ್ಯವಿದೆ ಎಂದು ಜವಾಹರಲಾಲ್ ನೆಹರು ಅತ್ಯಾಧುನಿಕ ವೈಜ್ಞಾನಿಕ ಸಂಶೋಧನಾ ಕೇಂದ್ರದ ಅಧ್ಯಕ್ಷ ಪ್ರೊ. ಎಂ.ಆರ್.ಎಸ್.ರಾವ್ ಹೇಳಿದರು.

ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಿರುವ ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಿ ಹೊಸ ಅವಕಾಶಗಳ ಕುರಿತ ಮೂರು ದಿನಗಳ ರಾಷ್ಟ್ರೀಯ ಸಮ್ಮೇಳನವನ್ನು ಉದ್ಘಾಟಿಸಿ ಮಾತನಾಡಿದ ಅವರು ಐಟಿ, ಬಿಟಿ ಕ್ಷೇತ್ರಗಳಲ್ಲಿನ ಆವಿಷ್ಕಾರಗಳಿಂದಾಗಿ ಲಕ್ಷಾಂತರ ಯುವಕರಿಗೆ ಉದ್ಯೋಗಾವಕಾಶಗಳು ದೊರೆತಿವೆ ಎಂದು ತಿಳಿಸಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಮಾತನಾಡಿ, ಜೈವಿಕ ತಂತ್ರಜ್ಞಾನ ಉದ್ಯಮ ಅತಿವೇಗದಿಂದ ಬೆಳೆಯುತ್ತಿದ್ದು, ಪ್ರಸ್ತುತ 2 ಶತಕೋಟಿ ಅಮೆರಿಕನ್ ಡಾಲರ್‌ನಷ್ಟು ವಹಿವಾಟು ನಡೆಸುತ್ತಿದ್ದು, 2010 ರ ವೇಳೆಗೆ 5 ಶತಕೋಟಿ ಡಾಲರ್‌ನಷ್ಟು ವಹಿವಾಟು ನಡೆಸುವ ನಿರೀಕ್ಷೆಯಿದೆ ಎಂದರು.

ಉಪಾಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು. ಜಂಟಿ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಪ್ರಾಂಶುಪಾಲ ಡಾ.ಎಂ.ಪ್ರಕಾಶ್, ಜೈವಿಕ ತಂತ್ರಜ್ಞಾನ ವಿಭಾಗದ ಮುಖ್ಯಸ್ಥರಾದ ಶಾಂತನುದಾಸ್, ಸಲ್ಮಾ ಬಾನು ಮುಂತಾದವರು ಉಪಸ್ಥಿತರಿದ್ದರು.



## ರೆಡ್ ಕ್ರಾಸ್

ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯ ಉಪಾಧ್ಯಕ್ಷ ವೂಡೆ ಪಿ.ಕೃಷ್ಣ ಹಾಗೂ ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರನ್ನು ಮಂಗಳವಾರ ಭೇಟಿ ಮಾಡಿ ಅಭಿನಂದಿಸಿದರು.

ಪ್ರಜಾವಾಣಿ

ಬುಧವಾರ

5ನೇ ಸೆಪ್ಟೆಂಬರ್ 2007

B 3

ಬುಧವಾರ 5 ಸೆಪ್ಟೆಂಬರ್ 2007

ಉದಯವಾಣಿ



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಉಪಾಧ್ಯಕ್ಷ ವೊಡೇ ಪಿ.ಕೃಷ್ಣ ಹಾಗೂ ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಅವರು ನೂತನ ರಾಜ್ಯಪಾಲ ಹಾಗೂ ರೆಡ್‌ಕ್ರಾಸ್ ಸಂಸ್ಥೆ ಅಧ್ಯಕ್ಷ ರಾಮೇಶ್ವರ್ ಠಾಕೂರ್ ಅವರನ್ನು ಭೇಟಿ ಮಾಡಿ ಅಭಿನಂದಿಸಿದರು.

ಸಂಜೆವಾಣಿ

ಬುಧವಾರ 5 ಸೆಪ್ಟೆಂಬರ್ 2007



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಹಾಗೂ ಗೌರವ ಕೋಶಾಧ್ಯಕ್ಷ ರಾಜು, ಚಂದ್ರಶೇಖರ್, ನೂತನ ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರನ್ನು ರಾಜಭವನದಲ್ಲಿ ಭೇಟಿ ಮಾಡಿ ಅಭಿನಂದಿಸಿದರು.

II
ವಿಜಯ ಕರ್ನಾಟಕ, ಬೆಂಗಳೂರು
ಬುಧವಾರ 5 ಸೆಪ್ಟೆಂಬರ್ 2007



ನೂತನ ರಾಜ್ಯಪಾಲ ಹಾಗೂ ರೆಡ್‌ಕ್ರಾಸ್ ಸಂಸ್ಥೆ ಅಧ್ಯಕ್ಷ ರಾಮೇಶ್ವರ ಠಾಕೂರ್ ಅವರನ್ನು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಮಂಗಳವಾರ ಭೇಟಿ ಮಾಡಿ ಸ್ವಾಗತಿಸಿದರು. ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.

ಬೆಂಗಳೂರು ವಿಜಯ
ಮಂಗಳವಾರ 4 ಸೆಪ್ಟೆಂಬರ್ 2007

# ಆಯ್ಕೆ

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾಗಿ ಡಬ್ಲ್ಯು.ಪಿ. ಕೃಷ್ಣ, ಉಪಾಧ್ಯಕ್ಷರಾಗಿ ಎಸ್.ಜಿ. ಸುಶೀಲಮ್ಮ, ಕಾರ್ಯದರ್ಶಿಯಾಗಿ ಸಿದ್ಧಾರ್ಥ ಶರ್ಮ, ಖಜಾಂಚಿಯಾಗಿ ಎಚ್. ರಾಮಪ್ಪ ಆಯ್ಕೆಯಾಗಿದ್ದಾರೆ.

ಪುಟ II ಪ್ರಜಾವಾಣಿ, ಮಂಗಳವಾರ 28ನೇ ಆಗಸ್ಟ್ 2007

# ಕಾನೂನು ಸಮ್ಮೇಳನಕ್ಕೆ ಆಯ್ಕೆ


ವೊಡೇ ಪಿ.ಕೃಷ್ಣ

ಆಗಸ್ಟ್ 29 ರಿಂದ 31 ರವರೆಗೆ ನ್ಯೂಜಿಲೆಂಡ್‌ನ ವೆಲ್ಲಿಂಗ್‌ಟನ್‌ನಲ್ಲಿ ನಡೆಯುವ 2 ನೇ ಕಾಮನ್‌ವೆಲ್ತ್ ಅಂತರರಾಷ್ಟ್ರೀಯ ಕಾನೂನು ಸಮ್ಮೇಳನದಲ್ಲಿ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆಯ ವೊಡೇ ಪಿ.ಕೃಷ್ಣ ಅವರು ಅಂತರರಾಷ್ಟ್ರೀಯ ರೆಡ್ ಕ್ರಾಸ್ ಸಮಿತಿಯ ಆಹ್ವಾನದ ಮೇರೆಗೆ ಭಾರತವನ್ನು ಪ್ರತಿನಿಧಿಸಲಿದ್ದಾರೆ.

ಕನ್ನಡಪ್ರಭ, ಸೋಮವಾರ, 27 ಆಗಸ್ಟ್ 2007

## ಕಾಮನ್‌ವೆಲ್ತ್ ಸಮ್ಮೇಳನಕ್ಕೆ ಕೃಷ್ಣ



- ನ್ಯೂಜಿಲೆಂಡ್‌ನ ವೆಲ್ಲಿಂಗ್‌ಟನ್ ನಗರದಲ್ಲಿ ಅಕ್ಟೋಬರ್ 29ರಿಂದ 31ರವರೆಗೆ ನಡೆಯುವ 2ನೇ ಕಾಮನ್‌ವೆಲ್ತ್ ಅಂತಾರಾಷ್ಟ್ರೀಯ ಮಾನವೀಯ ಕಾನೂನು ಸಮ್ಮೇಳನದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಭಾರತವನ್ನು ಪ್ರತಿನಿಧಿಸಲಿದ್ದಾರೆ.

ಸಂಜೆವಾಣಿ

ಭಾನುವಾರ 26 ಆಗಸ್ಟ್ 2007

# ಐಆರ್‌ಸಿ ಭಾರತ ಪ್ರತಿನಿಧಿಯಾಗಿ ವೂಡೆ ಪಿ. ಕೃಷ್ಣ

ಬೆಂಗಳೂರು, ಆ. ನ್ಯೂಜಿಲೆಂಡ್‌ನ ವೆಲ್ಲಿಂಗ್‌ಟನ್ ನಗರದಲ್ಲಿ ಆಗಸ್ಟ್ 29 ರಿಂದ 31 ರವರೆಗೆ ನಡೆಯಲಿರುವ 2ನೇ ಕಾಮನ್‌ವೆಲ್ತ್ ಅಂತರಾಷ್ಟ್ರೀಯ ಮಾನವೀಯ ಕಾನೂನು ಸಮ್ಮೇಳನದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಅವರು ಭಾರತವನ್ನು ಪ್ರತಿನಿಧಿಸಲಿದ್ದಾರೆ.



ಆಗಸ್ಟ್ 16, 2007

ಉದಯವಾಣಿ

# ಜಿನಿವಾ ಒಪ್ಪಂದದ ಮೌಲ್ಯ ಅರಿಯಲು ಕರೆ

[illegible]

ಸಮಾಜದಲ್ಲಿ ಪ್ರತಿಯೊಬ್ಬರೂ ಜಿನಿವಾ ಒಪ್ಪಂದದ ಮೌಲ್ಯವನ್ನು ಅರಿತು ಸೇವಾ ಮನೋಭಾವನೆಯಿಂದ ಕಾರ್ಯ ನಿರ್ವಹಿಸಬೇಕು ಎಂದು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಕರೆ ನೀಡಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಘಟಕದ ವತಿಯಿಂದ ರೆಡ್‌ಕ್ರಾಸ್ ಭವನದಲ್ಲಿ ಈಚೆಗೆ ನಡೆದ 'ಜಿನಿವಾ ಒಪ್ಪಂದ ದಿನಾಚರಣೆ' ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ಜಿನಿವಾದ ಎಲ್ಲಾ ಒಪ್ಪಂದಗಳು ನಿಸ್ವಾರ್ಥ ಸೇವಾ ಮನೋಭಾವನೆ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಹೋದರತೆಯನ್ನು ಪ್ರತಿಪಾದಿಸುವ ವಿಶಿಷ್ಟ ಗುಣ ಹೊಂದಿವೆ. ಇಂದಿನ ಯುವ ಜನತೆಯಲ್ಲಿ ಈ ಮೌಲ್ಯಗಳು ಮರೆಯಾಗುತ್ತಿದ್ದು, ಅವುಗಳನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಮುಂದಾಗಬೇಕಿದೆ ಎಂದು ಜೋಸೆಫ್ ಅಭಿಪ್ರಾಯಪಟ್ಟರು.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಉಪ ಸಭಾಧ್ಯಕ್ಷ ಪ್ರೊ. ಪಿ. ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ। ಎನ್. ಜಿ. ನಾರಾಯಣ ಮುಂತಾದವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಕನ್ನಡಪ್ರಭ, ಗುರುವಾರ, 16 ಆಗಸ್ಟ್ 2007

## ತರಗತಿ ಪ್ರಾರಂಭೋತ್ಸವ

ಶೇಷಾದ್ರಿಪುರ ಕಾನೂನು ಕಾಲೇಜಿನಲ್ಲಿ ತರಗತಿಗಳ ಪ್ರಾರಂಭೋತ್ಸವವನ್ನು ವೂಡೇ ಪಿ.ಕೃಷ್ಣ ಉದ್ಘಾಟಿಸಿದರು. ಷಡಕ್ಷರಿ, ಪ್ರಾಂಶುಪಾಲೆ ಪ್ರೊ.ಎ.ಜಿ. ಆಶಾ ಉಪಸ್ಥಿತರಿದ್ದರು.



ಪುಟ 3

ಪ್ರಜಾವಾಣಿ

ಸೋಮವಾರ
13ನೇ ಆಗಸ್ಟ್ 2007



ಶೇಷಾದ್ರಿಪುರದ ಕಾನೂನು ಕಾಲೇಜಿನಲ್ಲಿ ಶನಿವಾರ ನಡೆದ 2007-08ನೇ ಸಾಲಿನ ಶೈಕ್ಷಣಿಕ ವರ್ಷಾರಂಭ ಸಮಾರಂಭದಲ್ಲಿ ಉದ್ಯಮಿ ಷಡಕ್ಷರಿ, ಪ್ರಾಚಾರ್ಯರಾದ ಪ್ರೊ. ಎ.ಜಿ.ಆಶಾ, ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್‌ನ ಗೌರವ ಪ್ರಧಾನ ಕಾರ್ಯದರ್ಶಿ ಉದಯ್ ಪಿ.ಕೃಷ್ಣ, ಗೌರವ ಖಜಾಂಚಿ ಟಿ. ಎಸ್. ಹೆಂಜಾರಪ್ಪ ಪಾಲ್ಗೊಂಡಿದ್ದರು.

ಹೊಸ ದಿಗಂತ · 13-8-2007

# ಸಿನಿಮಾಗಳಲ್ಲಿ ರಕ್ತಸಿಕ್ತ ದೃಶ್ಯ ಪ್ರಸಾರ

## ಮುಖ್ಯ ನ್ಯಾಯಮೂರ್ತಿ ವಿಷಾದ




ಇಂದಿನ ಚಲನಚಿತ್ರಗಳಲ್ಲಿ ಚಿತ್ರಗೊಳ್ಳುತ್ತಿರುವ ರಕ್ತಸಿಕ್ತ ದೃಶ್ಯಗಳ ಪ್ರದರ್ಶನಕ್ಕೆ ರಾಜ್ಯ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಅವರು ವಿಷಾದ ವ್ಯಕ್ತಪಡಿಸಿದ್ದಾರೆ.

ಭಾನುವಾರ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಆಶ್ರಯದಲ್ಲಿ ನಡೆದ 'ಜಿನೀವಾ ಒಪ್ಪಂದ ದಿನಾಚರಣೆ -2007' ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ಇತ್ತೀಚಿನ ಸಿನಿಮಾ ಮತ್ತು ಟಿ.ವಿ. ಧಾರಾವಾಹಿಗಳು ಹೆಚ್ಚಿನ ಪ್ರಮಾಣದಲ್ಲಿ ರಕ್ತಸಿಕ್ತ ದೃಶ್ಯಗಳನ್ನು ಪ್ರಸಾರ ಮಾಡುತ್ತಿವೆ. ಇದು ಮಕ್ಕಳ ಮೇಲೆ ತೀವ್ರ ಪರಿಣಾಮ ಬೀರುವುದಲ್ಲದೆ ಅಂತಹ ದೃಶ್ಯ ವೀಕ್ಷಿಸುವ ಮಕ್ಕಳು ಕೆಟ್ಟ ಮಾರ್ಗದಲ್ಲಿ ಬೆಳೆಯಲು ಆಸ್ಪದ ಮಾಡಿಕೊಟ್ಟಂತಾಗುತ್ತದೆ.

ಹೀಗಾಗಿ ಸಮಾಜದ ಸ್ವಾಸ್ಥ್ಯ ಉಳಿಸುವ ನಿಟ್ಟಿನಲ್ಲಿ ಮುಖ್ಯವಾಗಿ ಎಳೆಯ ಮಕ್ಕಳ ಮನಸ್ಸಿನ ಮೇಲೆ ದುಷ್ಪರಿಣಾಮ ಬೀರುವ ದೃಶ್ಯ ಪ್ರಸಾರ ಮಾಡಬಾರದು. ಬದಲಾಗಿ ಮೌಲ್ಯಗಳು, ತ್ಯಾಗ ಮನೋಭಾವ ಹಾಗೂ ದೇಶದ ಬಗ್ಗೆ ಅಭಿಮಾನ ಬೆಳೆಸುವಂತ ಘಟನೆ ಚಿತ್ರವಾಗಬೇಕು. ಈ ಬಗ್ಗೆ ಶಿಕ್ಷಕರು ಮತ್ತು ಪೋಷಕರೂ ಸಹ ಜವಾಬ್ದಾರಿ ಹೊರಬೇಕು ಎಂದು ಅವರು ಕಿವಿಮಾತು ಹೇಳಿದರು.

ಎಳೆಯ ವಯಸ್ಸಿನಲ್ಲಿಯೇ ಮಕ್ಕಳಿಗೆ ಉತ್ತಮ ನಡುವಳಿಕೆ, ಶಿಸ್ತು ಹಾಗೂ ಮಾನವೀಯತೆ ಗುಣಗಳನ್ನು ಬೆಳೆಸುವತ್ತ ಎಲ್ಲರ ಸಹಕಾರ ಅಗತ್ಯವಿದೆ. ಆ ಮೂಲಕ ಮಕ್ಕಳು ದೇಶದ ಮುಂದಿನ ಸತ್ಪ್ರಜೆಗಳಾಗಿ ಬಾಳುವಂತೆ ಒಳ್ಳೆಯ ಮಾರ್ಗದರ್ಶನ ನೀಡಬೇಕಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

**ಕಳವಳ:** ದೇಶ ಸ್ವಾತಂತ್ರ್ಯ ಪಡೆದು 60 ವರ್ಷಗಳಾದರೂ ಭ್ರಷ್ಟಾಚಾರ ನಿಗ್ರಹಿಸಲು ಸಾಧ್ಯವಾಗಿಲ್ಲ. ಎಲ್ಲಿಯವರೆಗೆ ಲಂಚ ಕೊಡುವವರು ಇರುತ್ತಾರೋ ಅಲ್ಲಿಯವರೆಗೂ ಈ ಕೆಟ್ಟ ಪಿಡುಗು ಇರುತ್ತದೆ. ಹೀಗಾಗಿ ಜನತೆ ಲಂಚ ಕೊಡುವುದನ್ನು ನಿಲ್ಲಿಸಬೇಕು ಎಂದು ಸಿರಿಯಾಕ್ ಜೋಸೆಫ್ ಸಲಹೆ ನೀಡಿದರು.

ಸಮಾರಂಭದಲ್ಲಿ ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಉಪಸಭಾಧ್ಯಕ್ಷ ವೊಡೇ ಪಿ. ಕೃಷ್ಣ, ಪ್ರಧಾನ ಕಾರ್ಯದರ್ಶಿ ಡಾ. ಎಂ.ಜಿ. ನಾರಾಯಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.

NEW INDIAN EXPRESS

13-8-2007

# Geneva Convention Day celebrated

**Express News Service**

**Aug 12:** The India Red Cross Society celebrated the Geneva Convention Day, an event in 1949, that was marked by 135 countries signing the Geneva Convention, which dealt with the treatment of civilians and prisoners of war on humanitarian grounds.

Inaugurating the event, Karnataka Chief Justice Cyriac Joseph hailed the neutrality of the Red Cross movement and paid rich tributes to the volunteers for their spirit of service and sacrifice. Recalling Mahatma Gandhi's contribution to humanitarian causes, he said that greed beyond need was the root cause of all conflicts.

He also blamed the glorification of crime in films and the sense of greed that had given rise to blatant corruption, as some of the reasons for the decline of human values in today's youth. Vice-Chairman of the State branch of the Society Wooday P Krishna called upon Red Cross volunteers to disseminate information regarding misuse of the Red Cross emblem by the medical profession, hospitals and other medical centres. He said that the Red Cross was a sign of protection and hope to the wounded in times of conflict.

ಸಂಯುಕ್ತ ಕರ್ನಾಟಕ

13-8-2007 ನಗರ ಮತ್ತು ಗ್ರಾಮೀ

# ಜಿನಿವಾ ಒಪ್ಪಂದದ ಮೌಲ್ಯ ಅರಿಯಲು ಕರೆ

ಬೆಂಗಳೂರು, ಆ. 12– ಜಿನಿವಾ ಒಪ್ಪಂದದ ಮೌಲ್ಯವನ್ನು ಅರಿತು ಸೇವಾ ಮನೋಭಾವನೆಯಿಂದ ಕಾರ್ಯನಿರ್ವಹಿಸುವಂತೆ ಹೈಕೋರ್ಟಿನ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಇಂದಿಲ್ಲಿ ಹೇಳಿದರು.

ಜಿನಿವಾದ ಎಲ್ಲಾ ಒಪ್ಪಂದಗಳೂ ಕೂಡ ಸೇವಾ ಮನೋಭಾವನೆ, ಸೇವೆಯಲ್ಲಿ ತೃಪ್ತಿ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಹೋದರತೆಯನ್ನು ಪ್ರತಿಪಾದಿಸುತ್ತವೆ ಎಂದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಘಟಕದ ವತಿಯಿಂದ ಹಮ್ಮಿಕೊಂಡಿದ್ದ ಜಿನಿವಾ ಒಪ್ಪಂದ ದಿನಾಚರಣೆ ಉದ್ಘಾಟಿಸಿ ಅವರು ಮಾತನಾಡಿದರು.

ಯುವಜನತೆಯಲ್ಲಿ ಮೌಲ್ಯಗಳು ಮರೆಯಾಗುತ್ತಿದ್ದು ಅವುಗಳನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಮುಂದಾಗುವುದರ ಜೊತೆಗೆ ಸೇವಾ ಮನೋಭಾವನೆಯಿಂದ ಕೆಲಸ ಮಾಡಬೇಕು. ಇತ್ತೀಚಿನ ದಿನಗಳಲ್ಲಿ ಸಿನಿಮಾ ಮತ್ತು ಟಿ.ವಿ. ಮಾಧ್ಯಮಗಳಿಂದ ಉತ್ತೇಜಿತಗೊಂಡ ಮಕ್ಕಳು ಅಲ್ಲಿ ಮಾಡುವುದನ್ನು ಕಂಡು ಉತ್ತೇಜಿತರಾಗುತ್ತಿರುವುದು ವಿಷಾದನೀಯ ಎಂದು ಅವರು ಹೇಳಿದರು.

ಸಮಾಜದಲ್ಲಿ ಭ್ರಷ್ಟಾಚಾರ ತಾಂಡವವಾಡಲು ಸ್ವಾರ್ಥಪರ ಸಮಾಜ ಹಾಗೂ ಜನರೇ ಕಾರಣ. ಇದನ್ನು ಹೋಗಲಾಡಿಸುವ ಅಗತ್ಯವಿದೆ ಎಂದವರು ಹೇಳಿದರು.

ಸಮಾಜದಲ್ಲಿ ಉತ್ತಮ ವ್ಯಕ್ತಿಯಾಗಿದ್ದರೆ ಸಾಲದು ಒಳ್ಳೆಯ ಕೆಲಸಗಳನ್ನು ಮಾಡಬೇಕು. ಆ ಮೂಲಕ ಸೇವೆಯಲ್ಲಿ ತೃಪ್ತಿ ಪಡೆಯುವಂತೆ ಅವರು ಹೇಳಿದರು.

ಸಮಾರಂಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆಯ ಉಪ ಸಭಾಧ್ಯಕ್ಷ ಪೂಡೆ ಪಿ.ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ.ಎಸ್.ಪಿ. ನಾರಾಯಣ ಉಪಸ್ಥಿತರಿದ್ದರು.




ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಬೆಂಗಳೂರಿನಲ್ಲಿ ಭಾನುವಾರ ಏರ್ಪಡಿಸಿದ್ದ ಜಿನೀವಾ ಒಪ್ಪಂದ ದಿನಾಚರಣೆ ಸಂದರ್ಭದಲ್ಲಿ ರಾಜ್ಯ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಸಭೆಯನ್ನುದ್ದೇಶಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ರೆಡ್‌ಕ್ರಾಸ್‌ನ ಉಪಾಧ್ಯಕ್ಷ ಪೂಡೆ ಪಿ. ಕೃಷ್ಣ ಉಪಸ್ಥಿತರಿದ್ದರು.

ವಾರ್ತಾಭಾರತಿ ದಿನಾಂಕ 13-8-2007

# ಮೌಲ್ಯಗಳನ್ನು ಬೆಳೆಸಿಕೊಳ್ಳಲು ನ್ಯಾ.ಸಿರಿಯಾಕ್ ಜೋಸೆಫ್ ಕರೆ




ಬೆಂಗಳೂರು, ಆ.12: ಯುವ ಜನತೆಯಲ್ಲಿ ಮೌಲ್ಯಗಳು ಕ್ಷೀಣಿಸುತ್ತಿರುವ ಇಂದಿನ ಕಾಲಘಟ್ಟದಲ್ಲಿ ಅವುಗಳನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಯುವಜನತೆ ಮುಂದಾಗುವುದರ ಜೊತೆಗೆ ಸೇವಾ ಮನೋಭಾವನೆಯಿಂದ ಕೆಲಸ ಮಾಡುವಂತೆ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೇಫ್ ಕರೆ ನೀಡಿದ್ದಾರೆ.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಘಟಕದ ವತಿಯಿಂದ ರವಿವಾರ ಹಮ್ಮಿಕೊಂಡಿದ್ದ ಜಿನಿವಾ ಒಪ್ಪಂದದ ದಿನಾಚರಣೆ ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಇತ್ತೀಚಿನ ದಿನಗಳಲ್ಲಿ ಟಿ.ವಿ ಮತ್ತು ಸಿನಿಮಾ ಮಾಧ್ಯಮಗಳಿಂದ ಉತ್ತೇಜಿತಗೊಳ್ಳುತ್ತಿರುವ ಮಕ್ಕಳು ಅನ್ಯಮಾರ್ಗವನ್ನು ಹಿಡಿಯುತ್ತಿದ್ದಾರೆ ಎಂದು ವಿಷಾದಿಸಿದ ಅವರು, ಮಾಧ್ಯಮಗಳು ಸಮಾಜಕ್ಕೆ ಉತ್ತಮ ಮೌಲ್ಯಯುತವಾದ ವಿಚಾರಗಳನ್ನು ನೀಡುವತ್ತ ಗಮನಹರಿಸಬೇಕು ಎಂದರು.

ಪ್ರಸಕ್ತ ಸಮಾಜದಲ್ಲಿ ಭ್ರಷ್ಟಾಚಾರ ನಡೆಯುತ್ತಿರಲು ಸ್ವಾರ್ಥಪರ ಸಮಾಜ ಹಾಗೂ ಜನರೇ ಕಾರಣ. ಇದನ್ನು ಹೋಗಲಾಡಿಸುವ ಅನಿವಾರ್ಯತೆ ಇದೆ ಎಂದು ನ್ಯಾಯಮೂರ್ತಿ ಹೇಳಿದರು.

ಸಮಾಜದಲ್ಲಿ ಉತ್ತಮ ವ್ಯಕ್ತಿಯಾಗಿರುವ ಜೊತೆಗೆ ಉತ್ತಮ ಕೆಲಸ ಕಾರ್ಯಗಳನ್ನು ಮಾಡಬೇಕು ಎಂದು ಅವರು ಹೇಳಿದರು.

ಸಮಾರಂಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆಯ ಉಪಾಧ್ಯಕ್ಷ ಪೂಡೆ ಪಿ.ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ [illegible] ನಾರಾಯಣ ಮತ್ತಿತರರು ಹಾಜರಿದ್ದರು.

ಉದಯವಾಣಿ - 13-8-2007

# ಮಿತಿ ಮೀರಿದ ಭ್ರಷ್ಟಾಚಾರ: ಮುಖ್ಯ ನ್ಯಾಯಮೂರ್ತಿ ಕಳವಳ

ಬೆಂಗಳೂರು, ಆ. 12: ಮಿತಿ ಮೀರಿದ ಭ್ರಷ್ಟಾಚಾರದಿಂದ ನಮ್ಮ ದೇಶ ಮುಂದಿನ ದಿನಗಳಲ್ಲಿ ಅಪಾಯ ಎದುರಿಸುವ ಸಾಧ್ಯತೆಗಳಿವೆ ಎಂದು ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಇಂದು ಎಚ್ಚರಿಸಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆ ನಗರದಲ್ಲಿ ಏರ್ಪಡಿಸಿದ್ದ ಜಿನೀವಾ ಒಪ್ಪಂದ ದಿನಾಚರಣೆ ಉದ್ಘಾಟಿಸಿ ಮಾತನಾಡಿದ ಅವರು, 60ನೇ ಸ್ವಾತಂತ್ರ್ಯೋತ್ಸವ ಆಚರಣೆ ವೇಳೆಯಲ್ಲೂ ಭಾರತ ಭ್ರಷ್ಟಾಚಾರದಿಂದ ಮುಕ್ತವಾಗದಿರುವುದು ದುರಂತ ಎಂದು ವಿಷಾದಿಸಿದರು.

ಭ್ರಷ್ಟಾಚಾರ ತಡೆಗೆ ಯಾವುದೇ ಪ್ರತ್ಯೇಕ ಕಾನೂನು ಜಾರಿಯಾದರೂ, ಲಂಚ ಕೊಡುವವರು ಇರುವವರೆಗೂ ಭ್ರಷ್ಟಾಚಾರ ನಿಲ್ಲುವುದಿಲ್ಲ ಎಂಬ ಸತ್ಯದ ಅರಿವು ಎಲ್ಲರಿಗೂ ಇರಬೇಕು ಎಂದರು.

ಸಿನಿಮಾಗಳಲ್ಲಿ ಲಾಂಗು, ಮಚ್ಚು, ಕೋವಿ, ಮದ್ದು-ಗುಂಡುಗಳ ಮೂಲಕ ಕೊಲೆ, ಸುಲಿಗೆ, ದರೋಡೆ ಮಾಡುವ ರಕ್ತಸಿಕ್ತ ದೃಶ್ಯ ತೋರಿಸುವುದರಿಂದ ಎಳೆ ಮಕ್ಕಳ ಮೇಲೆ ತೀವ್ರ ದುಷ್ಪರಿಣಾಮ ಉಂಟಾಗುತ್ತಿದೆ. ಈ ಬಗ್ಗೆ ಮಾಧ್ಯಮ ಹಾಗೂ ನಾವೆಲ್ಲರೂ ಎಚ್ಚರ ವಹಿಸಬೇಕಾಗಿದೆ ಎಂದು ಹೇಳಿದರು.

ಇಂತಹ ದೃಶ್ಯಗಳನ್ನು ತೋರಿಸುವುದರಿಂದ ಮಕ್ಕಳಲ್ಲಿ ಕ್ರೌರ್ಯ ಬೆಳೆಯಲು ಪ್ರಚೋದನೆ ನೀಡಿದಂತಾಗುತ್ತದೆ. ಇದರಿಂದ ತ್ಯಾಗ, ಸೇವಾ ಮನೋಭಾವನೆಯ ಬೆಳವಣಿಗೆಗೆ ಕಡಿವಾಣ ಹಾಕಿದಂತಾಗುತ್ತದೆ ಎಂದರು.

ದೇಶ 60ನೇ ಸ್ವಾತಂತ್ರ್ಯೋತ್ಸವ ಆಚರಿಸುತ್ತಿರುವ ಈ ಸಂದರ್ಭದಲ್ಲಾದರೂ ಇಂತಹ ಸತ್ಯಾಂಶಗಳ ಕಡೆಗೆ ಗಮನ ಹರಿಸಬೇಕು. ಕ್ರೌರ್ಯವನ್ನು ಬಿಂಬಿಸುವ ಚಿತ್ರದ ದೃಶ್ಯಗಳಿಗೆ ಕಡಿವಾಣ ಹಾಕಬೇಕು. ಮಕ್ಕಳಲ್ಲಿ ಸೇವಾ ಮನೋಭಾವನೆ ಬೆಳೆಸಲು ಸಾಧ್ಯವಾಗುವ ಕಾರ್ಯಕ್ರಮಗಳಿಗೆ ವಿಶೇಷ ಒತ್ತು ನೀಡಬೇಕೆಂದು ಕರೆ ನೀಡಿದರು.

ಜಿನಿವಾದ ಎಲ್ಲ ಒಪ್ಪಂದಗಳೂ ಸೇವಾ ಮನೋಭಾವನೆಯಿಂದ ಕೂಡಿದ್ದು ಇಂತಹ ಮೌಲ್ಯಗಳನ್ನು ಯುವ ಜನತೆಯಲ್ಲಿ ತುಂಬಬೇಕಾಗಿದೆ. ಅಗತ್ಯ ಕಾರ್ಯಕ್ರಮಗಳ ಮೂಲಕ ಸೇವಾ ಪ್ರಜ್ಞೆ ಮೂಡಿಸಬೇಕಾಗಿದೆ ಎಂದರು.

ಮಕ್ಕಳ ಭವಿಷ್ಯ ರೂಪಿಸುವಲ್ಲಿ ಪೋಷಕರಂತೆ ಶಿಕ್ಷಕರು ಕೂಡ ವಿಶೇಷ ಗಮನ ಹರಿಸಬೇಕು. ಇಲ್ಲದಿದ್ದಲ್ಲಿ ಮುಂದಿನ ದಿನಗಳಲ್ಲಿ ಸ್ವತಃ ನಾವೇ ಅಪಾಯವನ್ನು ಆಹ್ವಾನಿಸಿದಂತಾಗುತ್ತದೆ ಎಂದು ಎಚ್ಚರಿಸಿದರು.

ಸಂಸ್ಥೆ ರಾಜ್ಯ ಉಪಾಧ್ಯಕ್ಷ ವುಡೇ ಪಿ. ಕೃಷ್ಣ, ಗೌ. ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್. ಜಿ. ನಾರಾಯಣ ಮತ್ತಿತರರು ಉಪಸ್ಥಿತರಿದ್ದರು.

[illegible] 13-8-2007

# ಹಿಂಸೆಯ ದೃಶ್ಯ: ಅಸಮಾಧಾನ

ಬೆಂಗಳೂರು, ಆ.12 - ಸಿನಿಮಾ ಹಾಗೂ ಟಿವಿ ಮಾಧ್ಯಮಗಳಲ್ಲಿ ಹಿಂಸೆಯ ದೃಶ್ಯಗಳನ್ನು ತೋರಿಸುವುದು ಮಹಾಪರಾಧ ಎಂದು ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸಫ್ ಹೇಳಿದ್ದಾರೆ.

ರೆಡ್ ಕ್ರಾಸ್ ಸಂಸ್ಥೆಯಲ್ಲಿ ಜಿನೀವಾ ಒಪ್ಪಂದ ಕುರಿತು ಏರ್ಪಡಿಸಿದ್ದ ಸಮಾರಂಭವನ್ನು ಉದ್ಘಾಟಿಸಿದ ಅವರು, ಹಿಂದೆ ಈ ರೀತಿಯ ದೃಶ್ಯಗಳನ್ನು ವೈಭವೀಕರಿಸುತ್ತಿರಲಿಲ್ಲ. ಆದರೆ ಈಗಿನ ಯುವ ಜನಾಂಗ ಇವುಗಳನ್ನು ನೋಡಿ ಮಾನವೀಯ ಅನುಕಂಪವನ್ನೇ ಕಳೆದುಕೊಳ್ಳುತ್ತಿದ್ದಾರೆ. ಅದರಲ್ಲೂ ಡಬ್ಲ್ಯು ಡಬ್ಲ್ಯುಎಫ್ ಚಾನೆಲ್‌ನಲ್ಲಿ ಹೆಣ್ಣುಮಕ್ಕಳು ಕುಸ್ತಿ ಮಾಡಿ ಮೈಯೆಲ್ಲಾ ರಕ್ತಮಾಡಿಕೊಂಡು ಗೋಳಾಡುವುದು. ಅದನ್ನು ನೋಡಿ ಸಂತೋಷ ಪಡುವುದು, ಸಂಸ್ಕೃತಿಯಲ್ಲ ಎಂದು ಹೇಳಿದರು.

ರೆಡ್ ಕ್ರಾಸ್ ಸಂಸ್ಥೆ ಮಾನವೀಯತೆಯ ಸಂಕೇತ. ಬೇರೆಯವರ ಹಿತಕ್ಕಾಗಿ ತಮ್ಮ ಸುಖ, ಸಂತೋಷ, ಪ್ರಾಣವನ್ನು ತ್ಯಾಗ ಮಾಡುವುದು ಮಾನವೀಯತೆಯ ಉನ್ನತ ಮೌಲ್ಯಗಳು. ಅದನ್ನು ನಮ್ಮ ಮಕ್ಕಳಿಗೆ ತಿಳಿಸಿಕೊಡಬೇಕು. ಸ್ವಾರ್ಥವೇ ಎಲ್ಲ ಕಡೆ ತುಂಬಿಕೊಂಡಿದೆ ಎಂಬ ಮನೋಭಾವ ಹೋಗಬೇಕು. ಜಿನೀವಾ ಒಪ್ಪಂದ ಇದನ್ನೇ ಹೇಳುತ್ತದೆ. 135 ದೇಶಗಳು ಈ ಒಪ್ಪಂದಕ್ಕೆ ಸಹಿ ಮಾಡಿವೆ. ಎರಡು ದೇಶಗಳ ನಡುವೆ ಯುದ್ಧ ಸಂಭವಿಸಿದಾಗ ಯುದ್ಧದಲ್ಲಿ ನೊಂದವರಿಗಾಗಿ ಶ್ರಮಿಸುವವರು ರೆಡ್‌ಕ್ರಾಸ್ ಸಂಸ್ಥೆಯವರು. ಅದರಿಂದಲೇ ಅಂತಾರಾಷ್ಟ್ರೀಯ ಮಟ್ಟದಲ್ಲಿ ಈ ಸಂಸ್ಥೆಗೆ ಮನ್ನಣೆ ಇದೆ ಎಂದರು.

ರೆಡ್ ಕ್ರಾಸ್ ಸಂಸ್ಥೆಯ ಖಜಾಂಚಿ ರಾಜು ಚಂದ್ರಶೇಖರ್ ಜಿನೀವಾ ಒಪ್ಪಂದದ ಮಹತ್ವ ವಿವರಿಸಿದರು. ಉಪಾಧ್ಯಕ್ಷ ವೂಡೆ ಆರ್. ಕೃಷ್ಣ ಅಧ್ಯಕ್ಷ …

ಭಾನುವಾರ,ಆ.12-2007
ಇಂದು ಸಂಜೆ

# ಭ್ರಷ್ಟಾಚಾರಕ್ಕೆ ಸಮಾಜವೇ ಹೊಣೆ

ಬೆಂಗಳೂರು, ಆ.12: ಭ್ರಷ್ಟಾಚಾರ ತಾಂಡವವಾಡಲು ಸ್ವಾರ್ಥ ಸಮಾಜ ಮತ್ತು ಜನರೇ ಕಾರಣ ಎಂದು ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಆತಂಕ ವ್ಯಕ್ತಪಡಿಸಿದ್ದಾರೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯಶಾಖೆ ಹಮ್ಮಿಕೊಂಡಿದ್ದ ಜಿನಿವಾ ಒಪ್ಪಂದ ದಿನಾಚರಣೆ ಉದ್ಘಾಟಿಸಿ ಮಾತನಾಡಿದ ಅವರು, ಒಳ್ಳೆಯ ಮನಸ್ಸಿದ್ದರೆ ಸಾಲದು. ಉತ್ತಮ ಕೆಲಸಮಾಡುವ ಎದೆಗಾರಿಕೆಯೂ ಇರಬೇಕೆಂದು ಸಲಹೆ ನೀಡಿದರು. ...2ನೇ ಪುಟಕ್ಕೆ...

# ಭ್ರಷ್ಟಾಚಾರಕ್ಕೆ ಸಮಾಜವೇ ಹೊಣೆ

1ನೇ ಪುಟದಿಂದ...
ಯುವಜನರಲ್ಲಿ ಮೌಲ್ಯಗಳು ನಶಿಸಿಹೋಗುತ್ತಿದ್ದು, ಮೌಲ್ಯ ಬೆಳೆಸುವ ನಿಟ್ಟಿನಲ್ಲಿ ಶಿಕ್ಷಕರು ಮತ್ತು ಸಮಾಜದ ಗಣ್ಯರು ಮುಂದಾಗಬೇಕು. ಮಾಧ್ಯಮಗಳಲ್ಲಿ ಮತ್ತು ಸಿನಿಮಾಗಳಲ್ಲಿ ಮೂಡಿಬರುತ್ತಿರುವ ಕಾರ್ಯಕ್ರಮಗಳ ಕೆಟ್ಟ ನಡವಳಿಕೆಯನ್ನು ಅನುಸರಿಸುವ ಮಕ್ಕಳ ಮನೋಭಾವವನ್ನು ತಿದ್ದುವ ಕೆಲಸ ನಡೆಯಲಿ ಎಂದರು.

ಮಾಧ್ಯಮಗಳಲ್ಲಿ ಕೆಟ್ಟ ಅಭಿರುಚಿಯ ಕಾರ್ಯಕ್ರಮಗಳು ಮೂಡಿಬಂದಾಗ ಅವುಗಳನ್ನು ವಿರೋಧಿಸುವ ಪ್ರವೃತ್ತಿ ಎಷ್ಟು ಜನ ಬೆಳೆಸಿಕೊಂಡಿದ್ದಾರೆ ಎಂದು ಪ್ರಶ್ನೆ ಮಾಡಿದ ಅವರು, ಉತ್ತಮ ಕೆಲಸ ಮಾಡುವ ಮೂಲಕ ಆತ್ಮ ಮತ್ತು ಸೇವಾ ತೃಪ್ತಿಯನ್ನು ಅನುಭವಿಸುವಂತೆ ಕರೆ ನೀಡಿದರು.

ಜಿನಿವಾ ಒಪ್ಪಂದದ ಅಂಶಗಳೂ ಸೇವಾ ಮನೋಭಾವದಿಂದ ಕೂಡಿವೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಹೋದರತೆಯನ್ನು ಪ್ರತಿಪಾದಿಸುವಂತಹ ಒಪ್ಪಂದಗಳನ್ನು ಎಲ್ಲರೂ ಅನುಸರಿಸುವಂತಾಗಬೇಕು ಎಂದು ಕಿವಿಮಾತು ಹೇಳಿದರು.

ಕರ್ನಾಟಕ ರೆಡ್‌ಕ್ರಾಸ್ ಶಾಖೆ ಉಪಸಭಾಧ್ಯಕ್ಷ ವೂಡೇಪಿ ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜೀವ್ ಚಂದಶೇಖರ್, ಪ್ರಧಾನ ಕಾರ್ಯದರ್ಶಿ ಡಾ.ಎನ್.ಜೆ.ನಾರಾಯಣ ಇತರರು ಹಾಜರಿದ್ದರು.

ಸಂಜೆವಾಣಿ

ಭಾನುವಾರ 12 ಆಗಸ್ಟ್ 2007

# ಜಿನಿವಾ ಒಪ್ಪಂದದ ಮೌಲ್ಯ ಅರಿಯಲು ಕರೆ



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಏರ್ಪಡಿಸಿದ್ದ ಜಿನಿವಾ ಒಪ್ಪಂದ ದಿನಾಚರಣೆ ಸಂದರ್ಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಹಾಗೂ ಹೈಕೋರ್ಟ್ ಮುಖ್ಯ ನ್ಯಾಯಾಧೀಶರಾದ ಸಿರಿಯಾಕ್ ಜೋಸೆಫ್.

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಆ. ೧೨- ಜಿನಿವಾ ಒಪ್ಪಂದದ ಮೌಲ್ಯವನ್ನು ಅರಿತು ಸೇವಾ ಮನೋಭಾವನೆಯಿಂದ ಕಾರ್ಯನಿರ್ವಹಿಸುವಂತೆ ಹೈಕೋರ್ಟ್‌ನ ಮುಖ್ಯನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಇಂದಿಲ್ಲಿ ಹೇಳಿದರು.

ಜಿನಿವಾದ ಎಲ್ಲಾ ಒಪ್ಪಂದಗಳೂ ಕೂಡ ಸೇವಾ ಮನೋಭಾವನೆ, ಸೇವೆಯಲ್ಲಿ ತೃಪ್ತಿ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಹೋದರತೆಯನ್ನು ಪ್ರತಿಪಾದಿಸುವುಗಳಾಗಿವೆ ಎಂದವರು ಹೇಳಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಘಟಕದ ವತಿಯಿಂದ ಹಮ್ಮಿಕೊಂಡಿದ್ದ ಜಿನಿವಾ ಒಪ್ಪಂದ ದಿನಚಾರಣೆ ಉದ್ಘಾಟಿಸಿ ಅವರು ಮಾತನಾಡಿದರು.

ಯುವ ಜನತೆಯಲ್ಲಿ ಮೌಲ್ಯಗಳು ಮರೆಯಾಗುತ್ತಿದ್ದು, ಅವುಗಳನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಮುಂದಾಗುವುದರ ಜೊತೆಗೆ ಸೇವಾ ಮನೋಭಾವನೆಯಿಂದ ಕೆಲಸ ಮಾಡಬೇಕು ಎಂದು ಹೇಳಿದರು.

ಇತ್ತೀಚಿನ ದಿನಗಳಲ್ಲಿ ಸಿನಿಮಾ ಮತ್ತು ಟಿ.ವಿ. ಮಾಧ್ಯಮಗಳಿಂದ ಉತ್ತೇಜಿತಗೊಂಡ ಮಕ್ಕಳು ಅಲ್ಲಿ ಮಾಡಿದುದನ್ನು ಕಂಡು ಉತ್ತೇಜಿತರಾಗುತ್ತಿರುವುದು ವಿಷಾಧನೀಯ ಎಂದು ಅವರು ಹೇಳಿದರು.

ಸಮಾಜದಲ್ಲಿ ಭ್ರಷ್ಟಾಚಾರ ತಾಂಡವವಾಡಲು ಸ್ವಾರ್ಥಪರ ಸಮಾಜ ಹಾಗೂ ಜನರೇ ಕಾರಣ. ಇದನ್ನು ಹೋಗಲಾಡಿಸುವ ಅಗತ್ಯವಿದೆ ಎಂದವರು ಹೇಳಿದರು.

ಸಮಾಜದಲ್ಲಿ ಉತ್ತಮ ವ್ಯಕ್ತಿಯಾಗಿದ್ದರೆ ಸಾಲದು ಒಳ್ಳೆಯ ಕೆಲಸಗಳನ್ನು ಮಾಡಬೇಕು. ಆ ಮೂಲಕ ಸೇವೆಯಲ್ಲಿ ತೃಪ್ತಿಪಡೆಯುವಂತೆ ಅವರು ಹೇಳಿದರು.

ಸಮಾರಂಭದಲ್ಲಿ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆಯ ಉಪಸಭಾಧ್ಯಕ್ಷ ವೂಡೆ ಪಿ. ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರುಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎಂ.ಜಿ. ನಾರಾಯಣ ಉಪಸ್ಥಿತರಿದ್ದರು.

ಈ ಸಂಜೆ

12-08-2007, ಭಾನುವಾರ

# ಸಿನಿಮಾಗಳಲ್ಲಿ ರಕ್ತಸಿಕ್ತ: ಮುಖ್ಯ ನ್ಯಾಯಮೂರ್ತಿ ನೋವು




ಜಿನಿವಾ ಒಪ್ಪಂದದ ದಿನಾಚರಣೆ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ನಗರದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮವನ್ನು ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಉದ್ಘಾಟಿಸಿ ಮಾತನಾಡುತ್ತಿರುವುದು.

ಬೆಂಗಳೂರು, ಆ.12- ಚಲನಚಿತ್ರ ಹಾಗೂ ಟಿವಿ ಧಾರಾವಾಹಿಗಳಲ್ಲಿ ರಕ್ತಸಿಕ್ತ ದೃಶ್ಯಗಳ ಪ್ರದರ್ಶನಕ್ಕೆ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಸಿರಿಯಾಕ್ ಜೋಸೆಫ್ ಇಂದಿಲ್ಲಿ ವಿಷಾದಿಸಿದರು.

ಜನಿವಾ ಒಪ್ಪಂದ ದಿನಾಚರಣೆ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಹಮ್ಮಿಕೊಂಡಿದ್ದ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಇತ್ತೀಚಿನ ದಿನಗಳಲ್ಲಿ ಚಲನಚಿತ್ರ ಹಾಗೂ ಟಿವಿ ಧಾರಾವಾಹಿಗಳಲ್ಲಿ ರಕ್ತಸಿಕ್ತ ದೃಶ್ಯಗಳಿಂದ ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀಳುವುದಲ್ಲದೆ, ಅವರಲ್ಲಿ ಕ್ರೂರತನ ಬೆಳೆಸಿದಂತಾಗುತ್ತಿದೆ ಎಂದು ಅವರು ಕಳವಳ ವ್ಯಕ್ತಪಡಿಸಿದರು.

ಮುಂದಿನ ಪೀಳಿಗೆ ಸ್ವಾಸ್ಥ್ಯ ಸಮಾಜಕ್ಕಾಗಿ ತ್ಯಾಗ ಮಾನವೀಯ ಮೌಲ್ಯಗಳನ್ನು ಬೆಳೆಸುವ ಮೂಲಕ ದೇಶ ರಕ್ಷಣೆಗೆ ಮುಂದಾಗಬೇಕು. ಇದರಲ್ಲಿ ಪೋಷಕರು ಹಾಗೂ ಶಿಕ್ಷಕರ ಜವಾಬ್ದಾರಿ ಹೆಚ್ಚಾಗಿರಬೇಕೆಂದು ಅಭಿಪ್ರಾಯಪಟ್ಟರು.

ತಮ್ಮ ಮಕ್ಕಳು ಏನು ಮಾಡುತ್ತಿದ್ದಾರೆ, ಎಲ್ಲಿ ಹೋಗಿದ್ದಾರೆ ಎಂಬುದರ ಬಗ್ಗೆ ಪೋಷಕರು ಗಮನಿಸದಿದ್ದರೆ ಮಕ್ಕಳು ಅನ್ಯ ಮಾರ್ಗ ಹಿಡಿಯುವ ಅಪಾಯವಿದೆ.

ಶಾಲೆಗಳಲ್ಲಿ ಶಿಕ್ಷಕರು ಮಕ್ಕಳ ಜವಾಬ್ದಾರಿ ಪೋಷಕರದೆಂದು ಸುಮ್ಮನಾದರೆ, ಮಕ್ಕಳು ತಪ್ಪು ಮಾಡಿದ ತಕ್ಷಣ ತಿದ್ದದಿದ್ದರೆ, ಕ್ರೂರ ಸಮಾಜ ಸೃಷ್ಟಿಯಾಗಲಿದೆ ಎಂದು ಅವರು ಆತಂಕ ವ್ಯಕ್ತಪಡಿಸಿದರು.

ಮಕ್ಕಳಲ್ಲಿ ಬಾಲ್ಯಾವಸ್ಥೆಯಿಂದಲೂ ಉತ್ತಮ ನಡವಳಿಕೆಗಳು, ಮೌಲ್ಯಗಳನ್ನು ತುಂಬಿ ತ್ಯಾಗ ಮಾನವೀಯತೆಗಳನ್ನು ಬೆಳೆಸುವ ಮೂಲಕ ಉತ್ತಮ ಸಮಾಜ ನಿರ್ಮಾಣವಾಗಬೇಕಿದೆ ಎಂದರು.

ದೇಶ 60ನೆ ಸ್ವಾತಂತ್ರ್ಯೋತ್ಸವದ ಸಂಭ್ರಮದಲ್ಲಿದೆ. ಈ ದೇಶದ ಪ್ರಸ್ತುತ ಅತ್ಯಂತ ಕೆಟ್ಟ ಸ್ಥಿತಿ ಏನೆಂದರೆ ವ್ಯಾಪಕವಾಗಿ ಹರಡಿರುವ ಭ್ರಷ್ಟಾಚಾರ ಎಂಬುದು ಸ್ಪಷ್ಟವಾಗಿದೆ ಎಂದು ಕಳವಳ ವ್ಯಕ್ತಪಡಿಸಿದರು.

ಲಂಚ ಕೊಡುವವರು, ಎಲ್ಲಿಯವರೆಗೂ ಇರುತ್ತಾರೋ, ಅಲ್ಲಿಯವರೆಗೂ ಭ್ರಷ್ಟಾಚಾರ ಇರುತ್ತದೆ.

ಲಂಚ ಕೊಡುವವರೇ ಭ್ರಷ್ಟಾಚಾರಕ್ಕೆ ಗೊಬ್ಬರ ಹಾಕಿದಂತೆ. ಆದಕಾರಣ ಲಂಚ ಕೊಡುವುದನ್ನು ಮೊದಲು ನಿಲ್ಲಿಸಬೇಕೆಂದರು.

ರೆಡ್‌ಕ್ರಾಸ್ ಸಂಸ್ಥೆಯ ಉಪಸಭಾಧ್ಯಕ್ಷ ವೊಡೇ ಪಿ.ಕೃಷ್ಣ, ಗೌರವ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ.ಎಂ.ಜಿ.ನಾರಾಯಣ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

II | ವಿಜಯ ಕರ್ನಾಟಕ, ಬೆಂಗಳೂರು
ಸೋಮವಾರ 30 ಜುಲೈ 2007

# ವಿದ್ಯಾರ್ಥಿಗಳಲ್ಲಿ ಏಕಾಗ್ರತೆ ಅಗತ್ಯ : ರಂಗನಾಥ್

ಯಲಹಂಕ, ಜು. 29- ವಿದ್ಯಾರ್ಥಿಗಳ ಜೀವನದಲ್ಲಿ ಪದವಿ ಶಿಕ್ಷಣ ದೊಡ್ಡ ಮೈಲಿಗಲ್ಲು ಇದನ್ನು ಗೆಲ್ಲಬೇಕಾದರೆ ಏಕಾಗ್ರತೆ ಮತ್ತು ಕಠಿಣ ಅಭ್ಯಾಸ ಅಗತ್ಯ ಎಂದು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿ ಡಾ. ಎಚ್.ಎ. ರಂಗನಾಥ್ ಹೇಳಿದರು.

ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಥಮ ವರ್ಷದ ಪದವಿ ತರಗತಿಗಳನ್ನು ಉದ್ಘಾಟಿಸಿ ಮಾತನಾಡಿದ ಅವರು, ವಿಷಯದ ಬಗ್ಗೆ ಅರಿತುಕೊಳ್ಳಲು ಹೆಚ್ಚಿನ ಆಸಕ್ತಿ ವಹಿಸಬೇಕು ಎಂದರು.

ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಮಾತನಾಡಿ, ಕಾಲೇಜಿನಲ್ಲಿ ಶಿಕ್ಷಣಕ್ಕೆ ಪೂರಕವಾದ ಅನೇಕ ಸೌಲಭ್ಯಗಳಿದ್ದು, ಇದನ್ನು ಬಳಸಿಕೊಂಡು ಉತ್ತಮ ವಿದ್ಯಾರ್ಥಿಗಳಾಗಿ ಹೊರ ಹೊಮ್ಮಬೇಕೆಂದು ಸಲಹೆ ನೀಡಿದರು.

ಸಂಸ್ಥೆಯ ಉಪಾಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು. ಎಸಿಟಿ ನಿರ್ದೇಶಕ ಡಾ. ಗುರುರಾಜ್ ಕರ್ಜಗಿ, ಟ್ರಸ್ಟಿ ವೀರಭದ್ರಯ್ಯ, ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ಪಿ.ಯು. ಕಾಲೇಜಿನ ಪ್ರಾಂಶುಪಾಲೆ ಡಾ.ಎಲ್. ಉಮಾದೇವಿ, ಪ್ರೌಢಶಾಲಾ ವಿಭಾಗದ ಜೆ.ಬಿ. ಕೃಷ್ಣಮೂರ್ತಿ ಮತ್ತಿತರರು ಹಾಜರಿದ್ದರು.



ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಥಮ ವರ್ಷದ ಪದವಿ ತರಗತಿಗಳನ್ನು ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ.ಎಚ್.ಎ.ರಂಗನಾಥ್ ಉದ್ಘಾಟಿಸಿದರು. (ಎಡದಿಂದ) ಪ್ರಾಂಶುಪಾಲ ಡಾ.ಎಂ.ಪ್ರಕಾಶ್, ಎ.ಸಿ.ಟಿ. ನಿರ್ದೇಶಕ ಡಾ.ಗುರುರಾಜ್ ಕರ್ಜಗಿ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ (ಬಲ ತುದಿ) ಚಿತ್ರದಲ್ಲಿದ್ದಾರೆ.

## ಕಠಿಣ ಅಭ್ಯಾಸ ಮಾಡಲು ಸಲಹೆ

ಯಲಹಂಕ: ಪದವಿ ಶಿಕ್ಷಣ ವಿದ್ಯಾರ್ಥಿಗಳ ಜೀವನದ ಮೈಲಿಗಲ್ಲು. ಈ ಗುರಿಯನ್ನು ಯಶಸ್ವಿಯಾಗಿ ಮುಟ್ಟಬೇಕಾದರೆ ಏಕಾಗ್ರತೆ ಮತ್ತು ಕಠಿಣ ಅಭ್ಯಾಸ ಅತ್ಯಗತ್ಯ ಎಂದು ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ.ಎಚ್. ಎ.ರಂಗನಾಥ್ ಹೇಳಿದರು.

ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಗುರುವಾರ ಪ್ರಥಮ ವರ್ಷದ ಪದವಿ ತರಗತಿಗಳನ್ನು ಉದ್ಘಾಟಿಸಿ ಮಾತನಾಡಿದ ಅವರು, ವಿಷಯಗಳ ಆಯ್ಕೆ ನಿಮ್ಮದು, ಆಯ್ದುಕೊಂಡ ವಿಷಯದ ಬಗ್ಗೆ ಅರಿತುಕೊಳ್ಳಲು ಹೆಚ್ಚಿನ ಆಸಕ್ತಿ ವಹಿಸಬೇಕು ಎಂದರು.

ಸಂಸ್ಥೆಯ ಪ್ರಧಾನ ಕಾರ್ಯದರ್ಶಿ




ವೂಡೆ ಪಿ.ಕೃಷ್ಣ ಮಾತನಾಡಿ, ಕಾಲೇಜಿನಲ್ಲಿ ಶಿಕ್ಷಣಕ್ಕೆ ಪೂರಕವಾದ ಅನೇಕ ಸೌಲಭ್ಯಗಳಿದ್ದು ಇದನ್ನು ಬಳಸಿಕೊಂಡು ಉತ್ತಮ ವಿದ್ಯಾರ್ಥಿಗಳಾಗಿ ಸಂಸ್ಥೆಯಿಂದ ಹೊರ ಹೊಮ್ಮಬೇಕು ಎಂದು ಕರೆ ನೀಡಿದರು.

ಸಂಸ್ಥೆಯ ಉಪಾಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು. ಎಸಿ.ಟಿ. ನಿರ್ದೇಶಕ ಡಾ.ಗುರುರಾಜ್ ಕರ್ಜಗಿ, ಟ್ರಸ್ಟಿ ವೀರಭದ್ರಯ್ಯ, ಪ್ರಾಂಶುಪಾಲ ಡಾ.ಎಂ.ಪ್ರಕಾಶ್, ಪಿ.ಯು.ಕಾಲೇಜಿನ ಪ್ರಾಂಶುಪಾಲ ಡಾ.ಎಲ್.ಉಮಾದೇವಿ, ಪ್ರೌಢಶಾಲಾ ಭಾಗದ ಪ್ರಾಂಶುಪಾಲ ಜಿ.ಬಿ.ಕೃಷ್ಣಮೂರ್ತಿ ಮತ್ತಿತರರು ಉಪಸ್ಥಿತರಿದ್ದರು.

## ಇಂದು ಉಚಿತ ಆರೋಗ್ಯ ತಪಾಸಣೆ

ನೆಲಮಂಗಲ : ಶಿವಗಂಗೆಯ ಮೇಲಣಗವಿಮಠದ ಜಿ.ಆರ್.ಎಸ್ ವಿದ್ಯಾಪೀಠದ ವತಿಯಿಂದ ಭಾನುವಾರ ಬೆಳಿಗ್ಗೆ 10ಗಂಟೆಗೆ ಮಠದ ಪ್ರಾರ್ಥನಾ ಮಂದಿರದಲ್ಲಿ ಉಚಿತ ನೇತ್ರ ಮತ್ತು ಆರೋಗ್ಯ ತಪಾಸಣಾ ಶಿಬಿರವನ್ನು ಏರ್ಪಡಿಸಲಾಗಿದೆ ಎಂದು ಮಲಯ ಶಾಂತಮುನಿ ಸ್ವಾಮೀಜಿ ತಿಳಿಸಿದ್ದಾರೆ.

ಅಪೋಲೊ ಆಸ್ಪತ್ರೆಯ ಎಸ್. ರಮೇಶ್, ಮಿಂಟೋ ಸ್ಪತ್ರೆಯ ಡಾ.ಎಸ್.ನಿರಂಜನ್, ಮುಕುಂದನ್, ರಾಮಮೂರ್ತಿ, ಡಾ.ಮಹಾಂತೇಶ್, ಡಾ.ನಟರಾಜ್ ಮುಂತಾದ ತಜ್ಞ ವೈದ್ಯರು ಶಿಬಿರದಲ್ಲಿ ಭಾಗವಹಿಸಲಿದ್ದಾರೆ. ಸಚಿವ ಚನ್ನಿಗಪ್ಪ ಶಿಬಿರ ಉದ್ಘಾಟಿಸಲಿದ್ದಾರೆ. ಶಿವಗಂಗೆ ಸುತ್ತಮುತ್ತಲ ಗ್ರಾಮಸ್ಥರು ಶಿಬಿರದ ಲಾಭ ಪಡೆದುಕೊಳ್ಳಬೇಕು ಎಂದು ಜಿ.ಆರ್.ಎಸ್. ವಿದ್ಯಾಸಂಸ್ಥೆಯು ಪ್ರಕಟಣೆಯಲ್ಲಿ ತಿಳಿಸಿದೆ.

## ಇಂದು ಉಚಿತ ಆಯುರ್ವೇದ ಚಿಕಿತ್ಸಾ ಶಿಬಿರ

ನೆಲಮಂಗಲ ಇಲ್ಲಿಯ ಕನ್ನಡ ಗೆಳೆಯರ ಬಳಗದ ಬೆಳ್ಳಿಹಬ್ಬದ ಅಂಗವಾಗಿ, ಜಯಚಾಮರಾಜೇಂದ್ರ ಆಯುರ್ವೇದ ವೈದಕೀಯ ಕಾಲೇಜು ಮತ್ತು ಮೆಡಿಸಿನ್ ಕೋ-ಆಪರೇಟಿವ್ ಸೊಸೈಟಿ ಸಹಯೋಗದಲ್ಲಿ ಭಾನುವಾರ ಬೆಳಿಗ್ಗೆ 10ಗಂಟೆಗೆ ಪಟ್ಟಣದ ಅಡೇಪೇಟೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಉಚಿತ ಆಯುರ್ವೇದ ಚಿಕಿತ್ಸಾ ಶಿಬಿರವನ್ನು ಏರ್ಪಡಿಸಲಾಗಿದೆ.

ಕರ್ನಾಟಕ ಆಯುರ್ವೇದ ಔಷಧಿ ತಯಾರಕರ ಸಂಘದ ಕಾರ್ಯದರ್ಶಿ ಜಿ.ಎಸ್.ಡಿ.ಪಾಣಿ ಸಮಾರಂಭದ ಉದ್ಘಾಟನೆ ಮಾಡಲಿದ್ದಾರೆ. ಜಿ.ಪಂ.ಸದಸ್ಯ ಬಿ.ಎಂ.ಎಲ್.ಕೃಷ್ಣಪ್ಪ ಅಧ್ಯಕ್ಷತೆ ವಹಿಸಲಿದ್ದಾರೆ. ರಮಣಮಹರ್ಷಿ ಫೌಂಡೇಷನ್‌ನ ಮ್ಯಾನೇಜಿಂಗ್ ಟ್ರಸ್ಟಿ ಬಿ.ಶ್ರೀನಿವಾಸರೆಡ್ಡಿ, ಕ್ಷೇತ್ರ ಶಿಕ್ಷಣಾಧಿಕಾರಿ ಹೆಚ್.ರಾಮ್‌ಕುಮಾರ್ ಮುಖ್ಯ ಅತಿಥಿಗಳಾಗಿ ಭಾಗವಹಿಸಲಿದ್ದಾರೆ.

## ರಕ್ತದಾನ ಶಿಬಿರ

ಕೆಂಗೇರಿ: ಹೆಗ್ಗನಹಳ್ಳಿ ನಾಗರಿಕ ಹಿತರಕ್ಷಣಾ ಸಮಿತಿ ವತಿಯಿಂದ ಜುಲೈ 29ರ ಭಾನುವಾರ ಬೆಳಿಗ್ಗೆ 9 ಗಂಟೆಗೆ ಬೃಹತ್ ಉಚಿತ ಆರೋಗ್ಯ ತಪಾಸಣೆ ಮತ್ತು ರಕ್ತದಾನ ಶಿಬಿರವನ್ನು ಹಮ್ಮಿಕೊಳ್ಳಲಾಗಿದೆ ಎಂದು ಸಮಿತಿ ಅಧ್ಯಕ್ಷ ಎಚ್.ಎನ್. ಗಂಗಾಧರ್ ತಿಳಿಸಿದರು.

ಹೆಗ್ಗನಹಳ್ಳಿಯ ಸರ್ಕಾರಿ ಶಾಲಾ ಮೈದಾನದಲ್ಲಿ ನೇತ್ರ ಪರೀಕ್ಷೆ, ಮೂತ್ರಪಿಂಡ ಪರೀಕ್ಷೆ, ಬಾಯಿ, ಗಂಟಲು, ಹೃದಯ ರೋಗ, ಮೂಳೆರೋಗ, ಶ್ವಾಸಕೋಶ, ರಕ್ತದೊತ್ತಡ, ಮಿದುಳು, ಮೂಗು, ಸ್ತ್ರೀರೋಗಗಳ ಪರೀಕ್ಷೆ, ಗರ್ಭಕೋಶ ಸೇರಿದಂತೆ ಎಲ್ಲಾ ರೀತಿಯ ಪರೀಕ್ಷೆ ಮತ್ತು ಔಷಧಿ ವಿತರಣೆ ಮಾಡುವ ಕಾರ್ಯಕ್ರಮ ಹಮ್ಮಿಕೊಂಡಿದೆ.

ಬೆಳಿಗ್ಗೆ 9ರಿಂದ ಮಧ್ಯಾಹ್ನ 3ರವರೆಗೆ ಆರೋಗ್ಯ ತಪಾಸಣೆ, ರಕ್ತದಾನ ಶಿಬಿರ ನಡೆಯಲಿದೆ.

ರಾಜ್ಯಪ್ರಗತಿ 25-7-2007

# ಶ್ರೇಷಾದ್ರಿಪುರ ವಿದ್ಯಾಸಂಸ್ಥೆ ತರಗತಿಗಳ ಉದ್ಘಾಟನೆ



ಶ್ರೇಷಾದ್ರಿಪುರ ಸಂಜೆ ಪದವಿ ಪೂರ್ವ ಕಾಲೇಜಿನ ಪ್ರಸಕ್ತ ಸಾಲಿನ ತರಗತಿಗಳನ್ನು ಹಿರಿಯ ಸಾಹಿತಿ ಪ್ರೊ.ಚಿ.ಶ್ರೀನಿವಾಸರಾಜು ಇತ್ತೀಚೆಗೆ ಉದ್ಘಾಟಿಸಿದರು. ವಿದ್ಯಾಸಂಸ್ಥೆಯ ಆಡಳಿತ ಮಂಡಳಿಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ. ಪ್ರಾಂಶುಪಾಲ ಪ್ರೊ.ಎಸ್.ಬೈರೇಗೌಡ, ಧರ್ಮದರ್ಶಿ ಎಸ್.ವೀರಭದ್ರಯ್ಯ ಮತ್ತಿತರರು ಚಿತ್ರದಲ್ಲಿದ್ದಾರೆ.

ಸಂಯುಕ್ತ ಕರ್ನಾಟಕ ಬೆಂಗಳೂರು

12-7-2007




ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಆಯೋಜಿಸಿದ್ದ ರಕ್ತದಾನ ಶಿಬಿರವನ್ನು ಬಿ.ಎಸ್.ಎನ್.ಎಲ್. ಪ್ರಧಾನ ಮುಖ್ಯ ಪ್ರಬಂಧಕ ಶುಭೇಂದು ಘೋಷ್ ರಕ್ತದಾನ ಮಾಡುವ ಮೂಲಕ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ರಾಜು ಚಂದ್ರಶೇಖರ್, ಬಿಎಸ್‌ಎನ್‌ಎಲ್ ಮುಖ್ಯ ಪ್ರಬಂಧಕ ಕೆ. ಸಂಪತ್‌ಕುಮಾರ್, ಕಲ್ಯಾಣಾಧಿಕಾರಿಗಳಾದ ಮೊರಬ್ ಹಾಗೂ ಮನೋಹರ್ ಮತ್ತಿತರರು ಹಾಜರಿದ್ದರು.

ಪ್ರಜಾವಾಣಿ

12-07-2007

# ಜನಸಂಖ್ಯಾ ದಿನಾಚರಣೆ



ಭಾರತೀಯ ರೆಡ್‌ಕ್ರಾಸ್ ಸೊಸೈಟಿ ಬೆಂಗಳೂರಿನಲ್ಲಿ ಬುಧವಾರ ಏರ್ಪಡಿಸಿದ್ದ ವಿಶ್ವ ಜನಸಂಖ್ಯಾ ದಿನಾಚರಣೆ ಕಾರ್ಯಕ್ರಮದಲ್ಲಿ ಮಾಜಿ ಸಂಸದೆ ಬಿಂಬಾ ರಾಯ್ಕರ್, ನಟಿ ಜಯಂತಿ, ರೆಡ್ ಕ್ರಾಸ್ ಸೊಸೈಟಿಯ ಖಜಾಂಚಿ ರಾಜು ಚಂದ್ರಶೇಖರ್ ಹಾಗೂ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಪಾಲ್ಗೊಂಡಿದ್ದರು.

ಉದಯವಾಣಿ
12-7-2007



ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ವತಿಯಿಂದ ಬೆಂಗಳೂರಿನಲ್ಲಿ ಬುಧವಾರ ಏರ್ಪಡಿಸಿದ್ದ ವಿಶ್ವಜನಸಂಖ್ಯಾ ದಿನಾಚರಣೆ ಕಾರ್ಯಕ್ರಮವನ್ನು ಹಿರಿಯ ನಟಿ ಜಯಂತಿ ಉದ್ಘಾಟಿಸಿದರು. ರಾಜ್ಯಸಭೆಯ ಮಾಜಿ ಸದಸ್ಯೆ ಬಿಂಬಾ ರಾಯ್ಕರ್, ಪಿ. ಕೃಷ್ಣರಾಜು ಚಂದ್ರಶೇಖರ್ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ, ಗುರುವಾರ, 12 ಜುಲೈ 2007

## ಜನಸಂಖ್ಯಾ ದಿನ

ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ರೇಸ್ ಕೋರ್ಸ್ ರಸ್ತೆಯಲ್ಲಿ ಬುಧವಾರ ಆಯೋಜಿಸಿದ್ದ ವಿಶ್ವ ಜನಸಂಖ್ಯಾ ದಿನಾಚರಣೆಯಲ್ಲಿ ಮಾಜಿ ಎಂ.ಪಿ. ಬಿಂಬಾ ರಾಯ್ಕರ್, ನಟಿ ಜಯಂತಿ, ಪಿ.ಕೃಷ್ಣ, ರಾಜು ಚಂದ್ರಶೇಖರ್ ಪಾಲ್ಗೊಂಡಿದ್ದರು.



ಈ ಸಂಜೆ
ಗುರುವಾರ, 12 ಜುಲೈ, 2007



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ನಗರದಲ್ಲಿಂದು ಹಮ್ಮಿಕೊಂಡಿದ್ದ ವಿಶ್ವ ಜನಸಂಖ್ಯಾ ದಿನಾಚರಣೆಯನ್ನು ನಟಿ ಜಯಂತಿ ಉದ್ಘಾಟಿಸಿದರು. ರಾಜ್ಯಸಭಾ ಸದಸ್ಯೆ ಬಿಂಬಾ ರಾಯ್ಕರ್, ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ರಕ್ತ ನಿಧಿ ಸಂಘಟಕ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.

ಪ್ರಜಾವಾಣಿ
ಬುಧವಾರ 11ನೇ ಜುಲೈ 2007



ಬಿಎಸ್‌ಎನ್‌ಎಲ್ ಹಾಗೂ ರೆಡ್‌ಕ್ರಾಸ್ ಸಂಸ್ಥೆ ನಗರದಲ್ಲಿ ಸೋಮವಾರ ಆಯೋಜಿಸಿದ್ದ ಸ್ವಯಂ ಪ್ರೇರಿತ ರಕ್ತದಾನ ಶಿಬಿರಕ್ಕೆ ಬಿಎಸ್‌ಎನ್‌ಎಲ್ ಪ್ರಧಾನ ಮುಖ್ಯ ಪ್ರಬಂಧಕ ಶುಭೇಂದು ಘೋಷ್ ಅವರು ರಕ್ತದಾನ ಮಾಡುವ ಮೂಲಕ ಚಾಲನೆ ನೀಡಿದರು. ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಘಟಕದ ಉಪ ಸಭಾಧ್ಯಕ್ಷ ವೂಡೆ ಪಿ.ಕೃಷ್ಣ, ಖಜಾಂಚಿ ರಾಜುಚಂದ್ರಶೇಖರ್, ಬಿಎಸ್‌ಎನ್‌ಎಲ್ ಮುಖ್ಯ ಪ್ರಬಂಧಕ ಕೆ.ಸಂಪತ್‌ಕುಮಾರ್ ಹಾಗೂ ಕಲ್ಯಾಣಾಧಿಕಾರಿ ಮೊರಬ್ ಹಾಗೂ ಮನೋಹರ್ ಉಪಸ್ಥಿತರಿದ್ದರು.

ಕನ್ನಡಪ್ರಭ, ಬುಧವಾರ, 11 ಜುಲೈ 2007



## ರಕ್ತದಾನ ಶಿಬಿರ

ಬಿಎಸ್‌ಎನ್‌ಎಲ್ ಹಾಗೂ ರೆಡ್‌ಕ್ರಾಸ್ ಸಂಸ್ಥೆ ಆಯೋಜಿಸಿದ್ದ ರಕ್ತದಾನ ಶಿಬಿರವನ್ನು ಬಿಎಸ್‌ಎನ್‌ಎಲ್ ಪ್ರಧಾನ ಮುಖ್ಯ ಪ್ರಬಂಧಕ ಶುಭೇಂದು ಘೋಷ್ ರಕ್ತದಾನ ಮಾಡುವ ಮೂಲಕ ಸೋಮವಾರ ನಗರದಲ್ಲಿ ಉದ್ಘಾಟಿಸಿದರು. ವೂಡೇ ಪಿ.ಕೃಷ್ಣ, ರಾಜು ಚಂದ್ರಶೇಖರ್, ಕೆ. ಸಂಪತ್ ಕುಮಾರ್ ಇದ್ದರು.

ಜುಲೈ 10, 2007 ಉದಯವಾಣಿ

ಚಿತ್ರಾಂಕಣ

## ನೆರವು



2004ರಲ್ಲಿ ಕಾಶ್ಮೀರ ಗಡಿ ಕುಪ್ಪುವಾಡ ಜಿಲ್ಲೆಯಲ್ಲಿ ಭಯೋತ್ಪಾದಕರೊಡನೆ ನಡೆದ ಗುಂಡಿನ ಚಕಮಕಿಯಲ್ಲಿ ಗಾಯಗೊಂಡ ಸಿಆರ್‌ಪಿಎಫ್ ಪೇದೆ ಕೆ.ಆರ್. ರಂಗಸ್ವಾಮಿ ಅವರು ಭಾರತೀಯ ರೆಡ್‌ಕ್ರಾಸ್ (ಕರ್ನಾಟಕ) ಸಂಸ್ಥೆಯ ನೆರವು ಕೋರಿದ್ದರು. ನೆರವಿಗೆ ಸ್ಪಂದಿಸಿದ ಸಂಸ್ಥೆಯ ಅಧಿಕಾರಿಗಳು ಈಚೆಗೆ ರಂಗಸ್ವಾಮಿ ಅವರ ನಿವಾಸದಲ್ಲಿ ಭೇಟಿಯಾಗಿ ತ್ರಿಚಕ್ರ ವಾಹನವನ್ನು ವಿತರಿಸಿದರು.

ಬೆಂಗಳೂರು ವಿಜಯ, ಸೋಮವಾರ, 9 ಜುಲೈ 2007




ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ವತಿಯಿಂದ ಕೆ.ಆರ್. ರಂಗಸ್ವಾಮಿಗೆ ತ್ರಿಚಕ್ರ ವಾಹನ ನೀಡಲಾಯಿತು. ಈ ಸಂದರ್ಭದಲ್ಲಿ ವೂಡೆ ಪಿ. ಕೃಷ್ಣ, ರಾಜು ಚಂದ್ರಶೇಖರ್, ಕೃಷ್ಣಮೂರ್ತಿ ಹಾಜರಿದ್ದರು.

# ತ್ರಿಚಕ್ರ ವಾಹನ ವಿತರಣೆ

ಬೆಂಗಳೂರು: ಸಿಆರ್‌ಪಿಎಫ್ ಪೇದೆ ಕೆ.ಆರ್. ರಂಗಸ್ವಾಮಿ ಅವರಿಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯಿಂದ ತ್ರಿಚಕ್ರ ವಾಹನ ವಿತರಿಸಲಾಯಿತು.

2004ರಲ್ಲಿ ಕಾಶ್ಮೀರ ಗಡಿ ಕುಪ್ವಾರ ಜಿಲ್ಲೆಯಲ್ಲಿ ಭಯೋತ್ಪಾದಕರ ವಿರುದ್ಧ ನಡೆದ ಗುಂಡಿನ ಚಕಮಕಿಯಲ್ಲಿ ಗುಂಡುಗಳ ಹೊಡೆತಕ್ಕೆ ಸಿಲುಕಿ ವಿಕಲಚೇತನರಾಗಿದ್ದ ಅವರಿಗೆ ರಾಜ್ಯ ರೆಡ್‌ಕ್ರಾಸ್ ಸಂಸ್ಥೆಯ ಉಪ ಸಭಾಧ್ಯಕ್ಷ ವೂಡೆ ಪಿ. ಕೃಷ್ಣ ಅವರು ಯಲಹಂಕದ ಸಿಆರ್‌ಪಿಎಫ್ ವಸತಿ ಗೃಹಕ್ಕೆ ಭೇಟಿ ನೀಡಿ ರಂಗಸ್ವಾಮಿ ಅವರಿಗೆ ತ್ರಿಚಕ್ರ ವಾಹನ ನೀಡಿದರು.

ಸಂಜೆವಾಣಿ ಶನಿವಾರ 7 ಜುಲೈ 2007

# ಉಗ್ರರ ಜೊತೆ ಸೆಣಸಿ ಗಾಯಗೊಂಡ ಪೇದೆಗೆ ರೆಡ್‌ಕ್ರಾಸ್ ಸಹಾಯಹಸ್ತ




ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಉಪಸಭಾಧ್ಯಕ್ಷ ವೂಡೇ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಉಪಕಾರ್ಯದರ್ಶಿ ಪಿ. ಕೃಷ್ಣಮೂರ್ತಿಯವರು ಸಿ.ಆರ್.ಪಿ.ಎಫ್. ವಸತಿಗೃಹಕ್ಕೆ ದಿನಾಂಕ 05.07.07ರಂದು ಭಯೋತ್ಪಾದಕರ ವಿರುದ್ಧ ಹೋರಾಡಿ ಗುಂಡಿನ ಚಕಮಕಿಯಲ್ಲಿ ಗುಂಡುಗಳ ಹೊಡಿತದಿಂದ ಸೊಂಟದ ಭಾಗಕ್ಕೆ ತೀವ್ರ ಪೆಟ್ಟು ಬಿದ್ದುದರಿಂದ ನಡೆದಾಡಲೂ ಸಾಧ್ಯವಾಗದೆ ತ್ರಿಚಕ್ರ ವಾಹನ ಮೋಟರ್ ಕೇಳಿದರೂ. ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ಅವರ ಮನವಿಗೆ ತಕ್ಷಣ ಸಂಧಿಸಿ ವಾಹನವನ್ನು ನೀಡಿದರೂ.

ಬೆಂಗಳೂರು, ಜು. ೬- ಸಿ.ಆರ್.ಪಿ.ಎಫ್. ಪೇದೆ ಕೆ.ಆರ್. ರಂಗಸ್ವಾಮಿಯವರು 2004ರಲ್ಲಿ ಕಾಶ್ಮೀರ ಗಡಿ ಕುಪ್ವಾಡ ಜಿಲ್ಲೆಯಲ್ಲಿ ಭಯೋತ್ಪಾದಕರ ವಿರುದ್ಧ ನಡೆದ ಗುಂಡಿನ ಚಕಮಕಿಯಲ್ಲಿ ಗುಂಡೇಟಿನಿಂದ ಸೊಂಟದ ಭಾಗಕ್ಕೆ ತೀವ್ರ ಪೆಟ್ಟುಬಿದ್ದುದರಿಂದ ನಿಲ್ಲಲು ಹಾಗೂ ನಡೆಯಲೂ ಸಾಧ್ಯವಾಗದೆ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ನೆರವನ್ನು ಕೋರಿದ್ದರು.

ರಾಜ್ಯ ರೆಡ್ ಕ್ರಾಸ್ ಸಂಸ್ಥೆಯ ಉಪಸಭಾಧ್ಯಕ್ಷರಾದ ವೂಡೇ ಪಿ. ಕೃಷ್ಣ ಅವರು ರಂಗಸ್ವಾಮಿಯವರ ಯಲಹಂಕದ ಸಿ.ಆರ್.ಪಿ.ಎಫ್. ವಸತಿಗೃಹಕ್ಕೆ ಭೇಟಿ ನೀಡಿ ಒಂದು ತ್ರಿಚಕ್ರ ವಾಹನವನ್ನು ನೀಡಿದರು.

ತಮ್ಮ ಪ್ರೌಢಶಾಲಾ ದಿನಗಳಲ್ಲಿ ರೆಡ್ ಕ್ರಾಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದ ವಿಷಯವನ್ನು ನೆನೆದು ರಂಗಸ್ವಾಮಿಯವರು ರೆಡ್ ಕ್ರಾಸ್ ಸಂಸ್ಥೆಯ ಬಗ್ಗೆ ಅಪಾರ ಗೌರವ ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಸಂಸ್ಥೆಯ ಗೌರವ ಕೋಶಾಧ್ಯಕ್ಷರಾದ ರಾಜು ಚಂದ್ರಶೇಖರ ಹಾಗೂ ಸಹಾಯಕ ಕಾರ್ಯದರ್ಶಿಗಳಾದ ಕೃಷ್ಣಮೂರ್ತಿಯವರು ಹಾಜರಿದ್ದರು.



## ರೆಡ್ ಕ್ರಾಸ್

ಕಾಶ್ಮೀರದಲ್ಲಿ ಭಯೋತ್ಪಾದಕರ ಗುಂಡಿನಿಂದ ಗಾಯಗೊಂಡ ಯೋಧ ಯಲಹಂಕದ ಕೆ.ಆರ್.ರಂಗಸ್ವಾಮಿ ಅವರ ಮನೆಗೆ ಗುರುವಾರ ತೆರಳಿದ ರಾಜ್ಯ ರೆಡ್‌ಕ್ರಾಸ್ ಸಂಸ್ಥೆ ಉಪ ಸಭಾಧ್ಯಕ್ಷ ವೂಡೆ ಪಿ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆ ವತಿಯಿಂದ ನೀಡಿದ ತ್ರಿಚಕ್ರ ವಾಹನವನ್ನು ವಿತರಿಸಿದರು.

ಪ್ರಜಾವಾಣಿ

B 3

ಶುಕ್ರವಾರ

6ನೇ ಜುಲೈ 2007




ಕಾಶ್ಮೀರ ಗಡಿ ಜಿಲ್ಲೆಯಲ್ಲಿ ಭಯೋತ್ಪಾದಕರ ವಿರುದ್ಧ ನಡೆದ ಗುಂಡಿನ ಚಕಮಕಿಯಲ್ಲಿ ಗುಂಡು ತಗುಲಿ ಕಾಲಿನ ಸ್ವಾಧೀನ ಕಳೆದುಕೊಂಡ ಸಿಆರ್‌ಪಿಎಫ್ ಪೇದೆ ಕೆ.ಆರ್. ರಂಗಸ್ವಾಮಿ ಅವರಿಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ತ್ರಿಚಕ್ರ ಸೈಕಲ್ ವಿತರಿಸಿತು. ಸಂಸ್ಥೆಯ ಮುಖ್ಯಸ್ಥ ವೂಡೇ ಪಿ. ಕೃಷ್ಣ, ರಾಜು ಚಂದ್ರಶೇಖರ್, ಪಿ. ಕೃಷ್ಣಮೂರ್ತಿ ಉಪಸ್ಥಿತರಿದ್ದರು.

ಪ್ರಜಾ ವಾಣಿ
ಬುಧವಾರ 04-07-2007

# ಶಿಕ್ಷಕರ ಶಿಬಿರ

ಯಲಹಂಕ: ಮಕ್ಕಳು ಕೇವಲ ಪಠ್ಯ ಕ್ರಮಗಳಲ್ಲಿ ನಡೆಯುವ ಪಾಠ ಪ್ರವಚನಗಳಿಗಷ್ಟೆ ಶಿಕ್ಷಕರನ್ನು ನಿರೀಕ್ಷಿಸದೆ ಪಠ್ಯೇತರ ಚಟುವಟಿಕೆ ಗಳಿಂದ ಆಕರ್ಷಿತರಾಗುತ್ತಾರೆ. ಇದರಿಂದ ಶಿಕ್ಷಕರ ಹಾಗೂ ಸಂಸ್ಥೆಯ ಘನತೆ ಹೆಚ್ಚುತ್ತದೆ ಎಂದು ಭಾರತ ಸೇವಾದಳದ ಕೇಂದ್ರ ಸಮಿತಿಯ ಕೋಶಾಧ್ಯಕ್ಷ ವೂಡೇ ಪಿ.ಕೃಷ್ಣ ಹೇಳಿದರು.

ಭಾರತ ಸೇವಾದಳ, ಜಿಲ್ಲಾ ಸಮಿತಿ




ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಉತ್ತರ ಜಿಲ್ಲೆ ಜಂಟಿಯಾಗಿ ಶೇಷಾದ್ರಿಪುರಂ ಸಂಯುಕ್ತ ಪದಪೂರ್ವ ಕಾಲೇಜಿನಲ್ಲಿ ಆಯೋಜಿಸಿರುವ ಎರಡು ದಿನಗಳ ಬೆಂಗಳೂರು ಉತ್ತರ ಜಿಲ್ಲಾ ಮಟ್ಟದ ಶಿಕ್ಷಕ-ಶಿಕ್ಷಕಿಯರ ಪುನಶ್ಚೇತನ ಶಿಬಿರವನ್ನು ಸೋಮವಾರ ಉದ್ಘಾಟಿಸಿ ಅವರು ಮಾತನಾಡಿದರು.

ಮಕ್ಕಳಲ್ಲಿ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಮೂಡಿಸುವ ರೀತಿಯಲ್ಲಿ ಶಿಕ್ಷಕರು ಮಾರ್ಗದರ್ಶನ ನೀಡಬೇಕು. ಸಮಾಜದಲ್ಲಿ ಅತ್ಯಧಿಕ ಗಣ್ಯವ್ಯಕ್ತಿಗಳು ಹಾಗೂ ಸ್ವಾತಂತ್ರ್ಯ ನಂತರದಲ್ಲಿ ಕಂಡಂತಹ ಅನೇಕ ರಾಜಕೀಯ ಮುಖಂಡರನ್ನು ಸೇವಾದಳ ತಯಾರು ಮಾಡಿದೆ ಎಂದು ತಿಳಿಸಿದರು.

ಪ್ರಾಸ್ತಾವಿಕವಾಗಿ ಮಾತನಾಡಿದ ಸಮಿತಿಯ ಯೋಜನಾಧಿಕಾರಿ ಲಿಂಗಪ್ಪ, ಶಿಕ್ಷಣ ಇಲಾಖೆಗೆ ಪೂರಕವಾದ ಶಿಕ್ಷಣವನ್ನು ಸೇವಾದಳ ನೀಡುತ್ತಿದೆ. ಈ ವರ್ಷದಲ್ಲಿ ಯೋಗ ಶಿಕ್ಷಣ ವರ್ಷ ಹಾಗೂ ಲಕ್ಷ ವೃಕ್ಷ ಯೋಜನೆ ಎಂಬ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಎಂದು ಮಾಹಿತಿ ನೀಡಿದರು.

ಉಪಾಧ್ಯಕ್ಷ ಬಿ.ಸಿ.ವೆಂಕಟೇಶ್ ಅಧ್ಯಕ್ಷತೆ ವಹಿಸಿದ್ದರು. ಬೆಂಗಳೂರು ನಗರ ಜಿಲ್ಲಾ ಸಂಘಟಕರಾದ ಕಾಶಿನಾಥ್ ಬಿ.ಹಂದ್ರಾಳ್, ವಿ.ಎಸ್.ರಾಣಿ, ಜಿಲ್ಲಾ ಸಮಿತಿಯ ಸದಸ್ಯ ಕಾಕೋಳು ಲಕ್ಕಪ್ಪ, ತಾಲ್ಲೂಕು ದೈಹಿಕ ಶಿಕ್ಷಣ ಸಂಯೋಜಕ ನರೇಂದ್ರಬಾಬು, ಮುಖ್ಯಶಿಕ್ಷಕರಾದ ಎಂ.ಕೆ.ಹನುಮೇಗೌಡ, ಜಯರಾಂ ಮತ್ತಿತರರು ಉಪಸ್ಥಿತರಿದ್ದರು.



ಯಲಹಂಕದ ಶೇಷಾದ್ರಿಪುರಂ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಸೋಮವಾರ ನಡೆದ ಬೆಂಗಳೂರು ಉತ್ತರ ಜಿಲ್ಲಾ ಮಟ್ಟದ ಶಿಕ್ಷಕ-ಶಿಕ್ಷಕಿಯರ ಪುನಶ್ಚೇತನ ಶಿಬಿರವನ್ನು ಭಾರತ ಸೇವಾದಳದ ಕೇಂದ್ರ ಸಮಿತಿಯ ಕೋಶಾಧ್ಯಕ್ಷ ವೂಡೇ ಪಿ.ಕೃಷ್ಣ ಉದ್ಘಾಟಿಸಿದರು, ಉಪಾಧ್ಯಕ್ಷ ಬಿ.ಸಿ.ವೆಂಕಟೇಶ್ ಮತ್ತಿತರರು ಉಪಸ್ಥಿತರಿದ್ದರು

ಬೆಂಗಳೂರು

ಮಂಗಳವಾರ 3 ಜುಲೈ 2007

# ಜಿಲ್ಲಾ ಶಾಖಾಭಿವೃದ್ಧಿ ಕಾರ್ಯಗಾರ

ಬೆಂಗಳೂರು: ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಮತ್ತು ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆಗಳ ಒಕ್ಕೂಟದ ಸಂಯುಕ್ತಾಶ್ರಯದಲ್ಲಿ ಏರ್ಪಡಿಸಿದ್ದ ಜಿಲ್ಲಾ ಶಾಖಾಭಿವೃದ್ಧಿ ಕಾರ್ಯಗಾರ ನಗರದಲ್ಲಿ ನಡೆಯಿತು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆಯ ಮಾಜಿ ಕೋಶಾಧ್ಯಕ್ಷ ಬಿ.ಎಲ್.ಎಸ್. ಮೂರ್ತಿ ಕಾರ್ಯಾಗಾರವನ್ನು ಉದ್ಘಾಟಿಸಿದರು. ಉಪ ಸಭಾಧ್ಯಕ್ಷ ವೂಡೆ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಮತ್ತು ರೆಡ್ ಕ್ರೆಸೆಂಟ್ ಸಂಸ್ಥೆಗಳ ಒಕ್ಕೂಟದ ಶಾಖಾಭಿವೃದ್ಧಿ ಅಧಿಕಾರಿ ಭಾವೇಶ್ ಸೋದಾಗರ್, ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ನವದೆಹಲಿ ಕೇಂದ್ರ ಕಾರ್ಯಾಲಯದ ಉದ್ಯೋಗಿಗಳ ಹಾಗೂ ಆಡಳಿತ ಮಂಡಳಿ, ನಿರ್ದೇಶಕ ಮನೀಶ್ ಚೌಧರಿ, ಗೌರವ ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಅತಿಥಿಗಳಾಗಿ ಭಾಗವಹಿಸಿದ್ದರು.

ಕಾರ್ಯಾಗಾರದಲ್ಲಿ ರೆಡ್‌ಕ್ರಾಸ್‌ನ ಮೂಲತತ್ವಗಳ ಮೌಲ್ಯ, ಚಿಹ್ನೆಗಳ ಮಸೂದೆ, ಜೂನಿಯರ್ ಮತ್ತು ಯೂತ್ ರೆಡ್ ಕ್ರಾಸ್ ಘಟಕವನ್ನು ರಾಜ್ಯಾದ್ಯಂತ ಶಾಲಾ ಕಾಲೇಜುಗಳಲ್ಲಿ ಬಲಪಡಿಸುವುದು ಯುವಜನತೆಯಲ್ಲಿ ದಿನನಿತ್ಯದ ರಕ್ತದ ಬೇಡಿಕೆಯನ್ನು ಈಡೇರಿಸಲು ರಕ್ತದಾನವನ್ನು ಜನಪ್ರಿಯಗೊಳಿಸುವ ಕುರಿತು ಚರ್ಚೆ ನಡೆಸಲಾಯಿತು.



ಜಿಲ್ಲಾ ಶಾಖಾಭಿವೃದ್ಧಿ ಕಾರ್ಯಗಾರದ ಉದ್ಘಾಟನಾ ಸಮಾರಂಭದಲ್ಲಿ ಬಿ.ಎಲ್.ಎಸ್. ಮೂರ್ತಿ, ವೂಡೆ ಪಿ. ಕೃಷ್ಣ, ರಾಜು ಚಂದ್ರಶೇಖರ್, ಭಾವೇಶ್ ಸೋದಾಗರ್, ಮನೀಶ್ ಚೌಧರಿ.

ವಿಜಯ ಕರ್ನಾಟಕ, ಬೆಂಗಳೂರು
ಭಾನುವಾರ 1 ಜುಲೈ 2007

# ರೆಡ್‌ಕ್ರಾಸ್ ಗ್ರಾಮೀಣರನ್ನು ತಲುಪಲಿ



ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಹಮ್ಮಿಕೊಂಡಿದ್ದ ಕಾರ್ಯಾಗಾರದಲ್ಲಿ ಬಿಎಲ್‌ಎಸ್ ಮೂರ್ತಿ, ವೂಡೇ ಪಿ. ಕೃಷ್ಣ, ರಾಜು ಚಂದ್ರಶೇಖರ್, ಡಾ. ಎನ್.ಜಿ. ನಾರಾಯಣ, ಭಾವೇಶ್ ಸೌದಾಗರ್, ಮನೀಶ್ ಚೌಧರಿ ಮತ್ತಿತರರು ಪಾಲ್ಗೊಂಡಿದ್ದರು.

ಬೆಂಗಳೂರು, ಜೂ.30- ರೆಡ್ ಕ್ರಾಸ್ ಸಂಸ್ಥೆಯ ಸೇವೆ ಗ್ರಾಮೀಣ ಜನರನ್ನೂ ತಲುಪುವಂತೆ ಮಾಡಬೇಕು ಎಂದು ಭಾರತೀಯ ರೆಡ್ ಕ್ರಾಸ್‌ನ ರಾಜ್ಯ ಶಾಖೆಯ ಮಾಜಿ ಕೋಶಾಧ್ಯಕ್ಷ ಲಯನ್ ಬಿ.ಎಲ್.ಎಸ್. ಮೂರ್ತಿ ಅಭಿಪ್ರಾಯಪಟ್ಟಿದ್ದಾರೆ.

ಅಂತಾರಾಷ್ಟ್ರೀಯ ರೆಡ್‌ಕ್ರಾಸ್, ರೆಡ್ ಕ್ರೆಸೆಂಟ್ ಸಂಸ್ಥೆಗಳ ಒಕ್ಕೂಟ ಹಾಗೂ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕೇಂದ್ರ ಕಾರ್ಯಾಲಯದ ಸಹಯೋಗದೊಂದಿಗೆ ಹಮ್ಮಿಕೊಂಡಿದ್ದ ಎರಡು ದಿನಗಳ ಶಾಖಾಭಿವೃದ್ಧಿ ಕಾರ್ಯಾಗಾರ ಉದ್ಘಾಟಿಸಿ ಶುಕ್ರವಾರ ಮಾತನಾಡಿದರು.

ರೆಡ್‌ಕ್ರಾಸ್ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವವರು ಸಾಮಾಜಿಕ ಕಳಕಳಿ ಹೊಂದಿರಬೇಕು. ಜಿಲ್ಲಾ, ತಾಲೂಕು ಹಾಗೂ ಹೋಬಳಿ ಮಟ್ಟದಲ್ಲಿ ಆರೋಗ್ಯ ತಪಾಸಣೆ, ರಕ್ತದಾನ ಶಿಬಿರ ಏರ್ಪಡಿಸಿ, ಗ್ರಾಮೀಣರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ರೆಡ್ ಕ್ರಾಸ್ ಮಾಡಬೇಕು. ಹಳ್ಳಿಗಳಲ್ಲಿ ವಾಸಿಸುವ ಜನರು ಉತ್ತಮ ಚಿಕಿತ್ಸೆ ಪಡೆಯಲು ಸಾಧ್ಯವಾಗುತ್ತಿಲ್ಲ. ಪ್ರತಿ ತಾಲೂಕು ಹಾಗೂ ಹೋಬಳಿಗಳಲ್ಲಿ ಸಂಚರಿಸಿ ತೊಂದರೆಗೊಳಗಾದವರ ನೆರವಿಗೆ ಕಾರ್ಯಕರ್ತರು ಧಾವಿಸಬೇಕು ಎಂದು ಸಲಹೆ ಮಾಡಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಉಪ ಸಭಾಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ಆಸಕ್ತರಿಗೆ ತರಬೇತಿ ನೀಡಲು ಸಂಸ್ಥೆ ನಿರ್ಧರಿಸಿದೆ ಎಂದರು.

ಭಾವೇಶ್ ಸೌದಾಗರ್, ಮನೀಶ್ ಚೌಧರಿ, ರಾಜು ಚಂದ್ರಶೇಖರ್, ಡಾ. ಎನ್.ಜಿ. ನಾರಾಯಣ ಮತ್ತಿತರರು ಪಾಲ್ಗೊಂಡಿದ್ದರು.

TIMES OF INDIA
Dt: 01-07-2007


# ತುರ್ತು ಸ್ಥಿತಿಯಲ್ಲಿ ರೆಡ್‌ಕ್ರಾಸ್ ನೆರವು

ಟೈಮ್ಸ್ ನ್ಯೂಸ್ ನೆಟ್‌ವರ್ಕ್

ಬೆಂಗಳೂರು: ತುರ್ತು ಪರಿಸ್ಥಿತಿ ಎದುರಾದಾಗ ಏನು ಮಾಡುತ್ತೀರಿ? ಎಲ್ಲಿಂದ ಸಹಾಯ ಬಯಸುತ್ತೀರಿ? ಇದಕ್ಕೆಲ್ಲಾ ಪರಿಹಾರವಾಗಿ ತುರ್ತುಪರಿಸ್ಥಿತಿಯಲ್ಲಿ ಅಗತ್ಯ ನೆರವು ನೀಡಲು ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಸನ್ನದ್ಧವಾಗುತ್ತಿದೆ.

ಪ್ರಾಕೃತಿಕ ವಿಕೋಪ ಎದುರಾದಾಗ ತುರ್ತುಕಾರ್ಯ ಕೈಗೊಳ್ಳಲು ಸಂಸ್ಥೆ ತನ್ನ ಕಾರ್ಯಕರ್ತರನ್ನು ಸಜ್ಜುಗೊಳಿಸುತ್ತಿದೆ. ಪ್ರವಾಹ ಮತ್ತು ಭೂ ಕುಸಿತದಂತಹ ದುರಂತ ಸಂಭವಿಸಿದಾಗ ಪರಿಹಾರ ಕೈಗೊಳ್ಳುವ ಕುರಿತು 27 ಜಿಲ್ಲೆಗಳ ಕಾರ್ಯಕರ್ತರಿಗೆ ಶುಕ್ರವಾರ ವಿಶೇಷ ಕಾರ್ಯಕ್ರಮ ನಡೆಯಿತು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಜಿಲ್ಲಾ ಘಟಕ ಸದೃಢಗೊಳಿಸಲು ಈ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು ಎಂದು ಸಂಸ್ಥೆಯ ರಾಜು ಚಂದ್ರಶೇಖರ್ ತಿಳಿಸಿದರು. 'ತುರ್ತುಪರಿಸ್ಥಿತಿ ಎದುರಿಸಲು ಸಂಪೂರ್ಣ ಸಜ್ಜುಗೊಳಿಸಲಾಗುವುದು. ಪ್ರವಾಹ, ಭೂಕುಸಿತ ಸಂಭವಿಸಿದಾಗ ಪರಿಹಾರ ಕಾರ್ಯ ಕೈಗೊಳ್ಳಲು ಯಾರೂ ಸಿದ್ಧತೆ ನಡೆಸಿರುವುದಿಲ್ಲ. ಸುನಾಮಿ ಸಂಭವಿಸಿದಾಗ ಸಾಕಷ್ಟು ಗೊಂದಲ ಉಂಟಾಗಿತ್ತು. ಇದನ್ನು ಸರಿಪಡಿಸಲು ಸ್ವಯಂ ಸೇವಕರು ಮತ್ತು ಅರೆ ವೈದ್ಯಕೀಯ ಸಿಬ್ಬಂದಿ ಒಗ್ಗೂಡಿಸಲು ಕಾರ್ಯಕರ್ತರಿಗೆ ಶಿಕ್ಷಣ ನೀಡಲಾಗುವುದು' ಎಂದು ವಿವರಿಸಿದರು.



ದುರಂತದ ಸಮಯದಲ್ಲಿ ಕಾರ್ಯಕರ್ತರು ಅನುಸರಿಸಬೇಕಾದ ಮಾರ್ಗಸೂಚಿ ಬಗ್ಗೆ ಸಂಸ್ಥೆ ಗಮನಹರಿಸಿದೆ. ಸಾರ್ವಜನಿಕರಿಗೆ 'ವರ್ಷದಲ್ಲಿ ನೂರು ಗಂಟೆ ಸಾಮಾಜಿಕ ಸೇವಾ' ಕಾರ್ಯಕ್ರಮ ರೂಪಿಸಲು ಯೋಜಿಸಲಾಗಿದೆ. ವೈದ್ಯರು, ವಕೀಲರು, ಪೊಲೀಸರು ಮತ್ತು ಐಟಿ ಸಿಬ್ಬಂದಿ ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಬಹುದು. ಯೋಜನೆಯ ರೂಪುರೇಷೆ ಸಿದ್ಧಪಡಿಸಲಾಗುತ್ತಿದ್ದು ಶೀಘ್ರ ಚಾಲನೆ ನೀಡುವುದಾಗಿ ಹೇಳಿದರು.

ಪದ್ಮಶ್ರೀ ಬಿಎಲ್‌ಎಸ್ ಮೂರ್ತಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಸಂಸ್ಥೆಯ ರಾಜ್ಯ ಉಪಾಧ್ಯಕ್ಷ ಉದಯ್ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಅಂತಾರಾಷ್ಟ್ರೀಯ ಫೆಡರೇಷನ್ ಭವೇಶ್ ಸೊದಾಗರ್ ಮತ್ತು ರಾಷ್ಟ್ರೀಯ ಸಂಸ್ಥೆಯ ಮನೀಶ್ ಚೌದರಿ ಇದ್ದರು.



ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆಗಳ ಒಕ್ಕೂಟ, ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯದ ಕರ್ನಾಟಕ ಶಾಖೆ ಆಶ್ರಯದಲ್ಲಿ ಎರಡು ದಿನಗಳ ರೆಡ್‌ಕ್ರಾಸ್ ಜಿಲ್ಲಾ ಶಾಖಾಭಿವೃದ್ಧಿ ಕಾರ್ಯಾಗಾರವನ್ನು ಸಮಾಜ ಸೇವಕ ಬಿ.ಎಲ್.ಎಸ್.ಮೂರ್ತಿ ಉದ್ಘಾಟಿಸಿದರು. ರೆಡ್‌ಕ್ರಾಸ್ ಉಪಾಧ್ಯಕ್ಷ ವೂಡೇ ಪಿ.ಕೃಷ್ಣ, ಕೋಶಾಧ್ಯಕ್ಷ ಡಾ.ರಾಜುಚಂದ್ರಶೇಖರ್, ಡಾ.ಎನ್.ಜಿ.ನಾರಾಯಣ, ಭಾವೇಶ್ ಸೋದಾಗರ್ ಉಪಸ್ಥಿತರಿದ್ದರು.

ಸಂಜೆ ವಾಣಿ

ಶನಿವಾರ 30 ಜೂನ್ 2007



ಅಂತಾರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆಗಳ ಒಕ್ಕೂಟ ಹಾಗೂ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಕರ್ನಾಟಕ ಶಾಖೆ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ 'ಜಿಲ್ಲಾ ಶಾಖಾಭಿವೃದ್ಧಿ ಕಾರ್ಯಾಗಾರ'ವನ್ನು ಸಮಾಜ ಸೇವಕ ಪದ್ಮಶ್ರೀ ಬಿ.ಎಲ್.ಎಸ್.ಮೂರ್ತಿ ಉದ್ಘಾಟಿಸಿದರು, ಇದೇ ಸಂದರ್ಭದಲ್ಲಿ ರೆಡ್‌ಕ್ರಾಸ್ ಉಪಸಭಾಧ್ಯಕ್ಷ ವೂಡೆ.ಪಿ.ಕೃಷ್ಣ, ರಕ್ತ ಸಂಘಟಕ ಹಾಗೂ ಕೋಶಾಧ್ಯಕ್ಷರಾದ ರಾಜುಚಂದ್ರಶೇಖರ್, ಭಾವೇಶ್ ಸೋದಾಗರ್, ಮುನೀಶ್ ಚೌಧರಿ, ಡಾ.ನಾರಾಯಣ ಉಪಸ್ಥಿತರಿದ್ದರು.

ಕನ್ನಡಪ್ರಭ, ಬೆಂಗಳೂರು
ಶನಿವಾರ, 30 ಜೂನ್ 2007

## ಸುದ್ದಿ ಸಂಕ್ಷೇಪ



ಬೆಂಗಳೂರಿನಲ್ಲಿ ಶುಕ್ರವಾರ ಆರಂಭವಾದ ಎರಡು ದಿನಗಳ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಬೆಳವಣಿಗೆ ಕುರಿತ ಕಾರ್ಯಾಗಾರದಲ್ಲಿ ಸೊಸೈಟಿಯ ವೈಸ್ ಚೇರ್ಮನ್ ಪುದೇ ಪಿ.ಕೃಷ್ಣ, ಕಜಾಂಚಿ ರಾಜು ಚಂದ್ರಶೇಖರ ಮತ್ತಿತರರು.

ಕನ್ನಡಪ್ರಭ
ಬುಧವಾರ, 20 ಜೂನ್ 2007



## ತರಗತಿ ಪ್ರಾರಂಭ

ಮಾಗಡಿ ರಸ್ತೆಯ ಶೇಷಾದ್ರಿಪುರ ಸ್ವತಂತ್ರ ಪದವಿಪೂರ್ವ ಕಾಲೇಜಿನ ಪ್ರಥಮ ಪಿಯುಸಿ ತರಗತಿಗಳ ಉದ್ಘಾಟನಾ ಕಾರ್ಯಕ್ರಮದಲ್ಲಿ ಪ.ಪೂ. ಶಿಕ್ಷಣ ಇಲಾಖೆ ಉಪ ನಿರ್ದೇಶಕ ಸೂರ್ಯಕಾಂತ ಗುಣಕಿಮಠ, ಪಿಕೆಸಿ ಹರ್ಲೆ, ಎಸ್. ಶೇಷನಾರಾಯಣ್, ವೂಡೇ ಪಿ.ಕೃಷ್ಣ ಮತ್ತಿತರರು ಭಾಗವಹಿಸಿದ್ದರು.

ಪ್ರಜಾವಾಣಿ
ಬುಧವಾರ 20ನೇ ಜೂನ್ 2007



ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ಪ್ರಥಮ ಪಿಯುಸಿ ತರಗತಿ ಉದ್ಘಾಟನಾ ಸಮಾರಂಭದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆ ಉಪ ನಿರ್ದೇಶಕ ಸೂರ್ಯಕಾಂತ ಗಣಕಿಮಠ, ಸಿಂಡಿಕೇಟ್ ಬ್ಯಾಂಕ್ ಉಪ ವ್ಯವಸ್ಥಾಪಕ ಪಿ.ಕೆ.ಸಿ.ಹರ್ಲೆ, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಎಸ್. ಶೇಷನಾರಾಯಣ್, ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಹಾಗೂ ಪ್ರಾಂಶುಪಾಲ ಎಸ್.ಉಮಾಶಂಕರ್ ಭಾಗವಹಿಸಿದ್ದರು.

ಮಂಗಳವಾರ 19 ಜೂನ್ 2007



ಶೇಷಾದ್ರಿಪುರ ಸಂಜೆ ಪದವಿ ಪೂರ್ವ ಕಾಲೇಜಿನ ಶೈಕ್ಷಣಿಕ ವರ್ಷದ ತರಗತಿಗಳ ಉದ್ಘಾಟನಾ ಕಾರ್ಯಕ್ರಮದಲ್ಲಿ ಸಾಹಿತಿ ಚಿ. ಶ್ರೀನಿವಾಸ ರಾಜು, ಪ್ರಾಂಶುಪಾಲ ಪ್ರೊ.ಎಸ್. ಬೈರೇಗೌಡ, ಕೆ.ಎಂ. ನಂಜಪ್ಪ ವೊಡೇ ಪಿ. ಕೃಷ್ಣ, ಎಸ್.ವೀರಭದ್ರಯ್ಯ, ಕೃಷ್ಣಸ್ವಾಮಿ ಭಾಗವಹಿಸಿದ್ದರು.

ಪ್ರಜಾವಾಣಿ




ಶುಕ್ರವಾರ 15ನೇ ಜೂನ್ 2007

# ರಕ್ತದಾನ: ಜಾಗೃತಿಗೆ ಆಂದೋಲನ ಅಗತ್ಯ

ಪ್ರಜಾವಾಣಿ ವಾರ್ತೆ

ಬೆಂಗಳೂರು: ರಕ್ತದಾನದ ಕಾರ್ಯಕ್ರಮಗಳು ಆಂದೋಲದ ರೀತಿಯಲ್ಲಿ ನಡೆದಾಗ ಮಾತ್ರ ಜನತೆಯಲ್ಲಿ ಹೆಚ್ಚಿನ ಜಾಗೃತಿ ಮೂಡಿಸಲು ಸಾಧ್ಯವಾಗುತ್ತದೆ ಎಂದು ವಿಧಾನಪರಿಷತ್ತಿನ ಸಭಾಪತಿ ಪ್ರೊ. ಬಿ.ಕೆ.ಚಂದ್ರಶೇಖರ್ ಇಲ್ಲಿ ತಿಳಿಸಿದರು.

ವಿಶ್ವ ರಕ್ತದಾನಿಗಳ ದಿನಾಚರಣೆಯ ಪ್ರಯುಕ್ತ ಭಾರತೀಯ ರೆಡ್ ಕ್ರಾಸ್ ಸೊಸೈಟಿ ರಾಜ್ಯ ಶಾಖೆಯ ವತಿಯಿಂದ ಗುರುವಾರ ಏರ್ಪಡಿಸಿದ್ದ ಜನ ಜಾಗೃತಿ ಜಾಥಾಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ಈ ಸಂಬಂಧ ಜನ ಸಾಮಾನ್ಯರಲ್ಲಿ ಜಾಗೃತಿ ಮೂಡಿಸಲು ಸರ್ಕಾರ ಸೂಕ್ತ ಸಹಕಾರ ಮತ್ತು ಪ್ರೋತ್ಸಾಹ ನೀಡಬೇಕು ಎಂದು ಹೇಳಿದರು. ರೆಡ್ ಕ್ರಾಸ್‌ನ ಚಟುವಟಿಕೆಗಳಿಗೆ ಸರ್ಕಾರ ಹೆಚ್ಚಿನ ನೆರವು ನೀಡಲು ಮುಂದಾಗಬೇಕು ಎಂದು ಕರೆ ನೀಡಿದರು.

ರೆಡ್‌ಕ್ರಾಸ್ ಸೊಸೈಟಿಯ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ ಮಾತನಾಡಿ, ರಕ್ತದಾನ ಮಾಡಲು ಕಾಲೇಜು ವಿದ್ಯಾರ್ಥಿಗಳು ಹೆಚ್ಚಿನ ಆಸಕ್ತಿ ತೋರಬೇಕಿದೆ ಎಂದರು.

ಸೊಸೈಟಿಯ ಖಜಾಂಚಿ ರಾಜು ಚಂದ್ರಶೇಖರ್ ಮಾತನಾಡಿ, ರಾಜ್ಯದಲ್ಲಿ ಪ್ರಸ್ತುತ 5.5 ಲಕ್ಷ ಯೂನಿಟ್‌ನಷ್ಟು ರಕ್ತದ ಬೇಡಿಕೆಯಿದೆ. ಆದರೆ ಪ್ರಸ್ತುತ 3.6 ಲಕ್ಷ ಯೂನಿಟ್ ರಕ್ತ ಮಾತ್ರ ಲಭ್ಯವಾಗುತ್ತಿದೆ ಎಂದು ಮಾಹಿತಿ ನೀಡಿದರು.

ರಕ್ತದಾನ ಮಾಡುವುದರಿಂದ ಹೃದಯಾಘಾತಕ್ಕೆ ಒಳಗಾಗುವುದನ್ನು ತಡೆಗಟ್ಟಬಹುದಾಗಿದೆ. ಸಾರ್ವಜನಿಕರು ಈ ಹಿನ್ನೆಲೆಯಲ್ಲಿ ಸ್ವಯಂ ಪ್ರೇರಣೆಯಿಂದ ರಕ್ತದಾನ ಮಾಡಲು ಮುಂದಾಗಬೇಕು ಎಂದು ಅವರು ಮನವಿ ಮಾಡಿದರು.



ವಿಶ್ವ ರಕ್ತದಾನಿಗಳ ದಿನಾಚರಣೆ ಪ್ರಯುಕ್ತ ಭಾರತೀಯ ರೆಡ್ ಕ್ರಾಸ್ ಸೊಸೈಟಿಯ ಕರ್ನಾಟಕ ಶಾಖೆಯು ಗುರುವಾರ ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಜನ ಜಾಗೃತಿ ಜಾಥಾಕ್ಕೆ ವಿಧಾನಪರಿಷತ್ತಿನ ಸಭಾಪತಿ ಪ್ರೊ. ಬಿ.ಕೆ.ಚಂದ್ರಶೇಖರ್ ಹಸಿರು ನಿಶಾನೆ ತೋರಿಸಿದರು. ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯ ಉಪಾಧ್ಯಕ್ಷ ವೊಡೇ ಪಿ.ಕೃಷ್ಣ ಹಾಗೂ ಖಜಾಂಚಿ ರಾಜು ಚಂದ್ರಶೇಖರ್ ಈ ಸಂದರ್ಭದಲ್ಲಿ ಈಹಾಜರಿದ್ದರು. -ಕೆಪಿಎನ್ ಚಿತ್ರ

ಸೊಸೈಟಿಯ ಆಡಳಿತ ಮಂಡಳಿ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಸದಸ್ಯರಾದ ನಾಗರಾಜು, ಸರೋಜಮ್ಮ, ಡಾ. ಎನ್.ಎ.ಸುರೇಶ್ ಹಾಗೂ ಕಾಲೇಜು ವಿದ್ಯಾರ್ಥಿಗಳು ಜಾಥಾದಲ್ಲಿ ಭಾಗವಹಿಸಿದ್ದರು.

ಜಾಥಾ: ನರ್ಸಿಂಗ್ ಕಾಲೇಜುಗಳ 300 ವಿದ್ಯಾರ್ಥಿಗಳು ಸುಮಾರು ಸೇರಿದಂತೆ 400 ಜನರು ಜಾಥಾದಲ್ಲಿ ಪಾಲ್ಗೊಂಡಿದ್ದರು. ಜಾಥಾವು ರೆಡ್‌ಕ್ರಾಸ್ ಭವನದಿಂದ ಆರಂಭವಾಗಿ ಸುಬ್ಬಣ್ಣ ವೃತ್ತ, ಆನಂದರಾವ್ ವೃತ್ತ, ಶೇಷಾದ್ರಿಪುರ ಕಾಲೇಜು ಮತ್ತು ಶಿವಾನಂದ ವೃತ್ತದ ಮೂಲಕ ರೆಡ್‌ಕ್ರಾಸ್ ಭವನವನ್ನು ತಲುಪಿತು.

ಕಾರ್ಪೋರೇಟ್ ವಲಯ: ರಕ್ತದಾನಿಗಳ ದಿನಾಚರಣೆಯ ಪ್ರಯುಕ್ತ ಕಾರ್ಪೋರೇಟ್ ವಲಯದ ಉದ್ಯೋಗಿಗಳು ಸಹ ರಕ್ತದಾನ ಮಾಡಿದರು. ‘i4i’ ಬಿಜಿನೆಸ್ ಸಲ್ಯೂಷನ್ಸ್ ಕಂಪೆನಿಯವರು ಲಯನ್ಸ್ ಬ್ಲಡ್ ಬ್ಯಾಂಕ್ ಸಹಭಾಗಿತ್ವದಲ್ಲಿ ರಕ್ತದಾನ ಶಿಬಿರ ಏರ್ಪಡಿಸಿತ್ತು. ಇದರಲ್ಲಿ 85 ಯೂನಿಟ್ ರಕ್ತ ಸಂಗ್ರಹಿಸಲಾಗಿದೆ ಎಂದು ಬ್ಲಡ್ ಬ್ಯಾಂಕ್‌ನ ಸಂಚಾಲಕ ದೀಪಕ್ ತಿಳಿಸಿದರು.

18 ವರ್ಷ ತುಂಬಿದ ಪ್ರತಿ ನಾಗರಿಕರು ಹುಟ್ಟುಹಬ್ಬ, ವಿವಾಹ ವಾರ್ಷಿಕೋತ್ಸವ ಮೊದಲಾದ ಸ್ಮರಣೀಯ ದಿನಗಳಂದು ಸ್ವಯಂ ಪ್ರೇರಣೆಯಿಂದ ರಕ್ತದಾನ ಮಾಡಲು ಮುಂದಾಗುವಂತೆ ದೀಪಕ್ ಮನವಿ ಮಾಡಿದರು.

ಏರ್‌ಪೋರ್ಟ್ ರಸ್ತೆಯಲ್ಲಿರುವ ಬಿಟಿಓ (24/7) ಕಂಪೆನಿಯು ಭಾರತೀಯ ರೆಡ್ ಕ್ರಾಸ್ ಸೊಸೈಟಿಯ ಸಹಯೋಗದೊಂದಿಗೆ ರಕ್ತದಾನ ಶಿಬಿರ ನಡೆಸಿತು. ಕಂಪೆನಿಯ ಸಿಬ್ಬಂದಿ ಸ್ವಯಂ ಪ್ರೇರಣೆಯಿಂದ ಶಿಬಿರದಲ್ಲಿ ಭಾಗವಹಿಸಿ ರಕ್ತದಾನ ಮಾಡಿದರು. ದೃಷ್ಟಿದೋಷವುಳ್ಳ ರೋಷನ್ ಎಂಬುವವರು 54ನೇ ಬಾರಿ ರಕ್ತದಾನ ಮಾಡಿದ್ದು ವಿಶೇಷವಾಗಿತ್ತು.

# ರಕ್ತದಾನದಿಂದ ಹೃದಯಾಘಾತ ಕಡಿಮೆ

ವರ್ಷದಲ್ಲಿ ಮೂರು ಬಾರಿ ರಕ್ತದಾನ ಮಾಡುವುದರಿಂದ ಹೃದಯಾಘಾತದ ಸಾಧ್ಯತೆಗಳು ಕಡಿಮೆ ಎಂದು ರೆಡ್ ಕ್ರಾಸ್ ಸಂಸ್ಥೆಯ ರಾಜು ಚಂದ್ರಶೇಖರ್ ಹೇಳಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆ ವಿಶ್ವ ರಕ್ತದಾನಿಗಳ ದಿನದ ಅಂಗವಾಗಿ ಗುರುವಾರ ಆಯೋಜಿಸಿದ್ದ ಜನ ಜಾಗೃತಿ ಜಾಥಾ ಉದ್ಘಾಟನೆ ಸಮಾರಂಭದಲ್ಲಿ ಮಾತನಾಡಿದರು.

ರಾಜ್ಯದಲ್ಲಿ ಪ್ರತಿ ವರ್ಷ ಸುಮಾರು 5.5 ಲಕ್ಷ ಯೂನಿಟ್ ರಕ್ತಕ್ಕೆ ಬೇಡಿಕೆಯಿದೆ. ಆದರೆ, ಪೂರೈಕೆಯಾಗುತ್ತಿರುವುದು 3.6 ಲಕ್ಷ ಯೂನಿಟ್ ಮಾತ್ರ. ಈ ವ್ಯತ್ಯಾಸ ಸರಿದೂಗಿಸಲು ರಕ್ತದಾನ ಶಿಬಿರಗಳನ್ನು ಆಂದೋಲನ ಮಾದರಿಯಲ್ಲಿ ಆಯೋಜಿಸಬೇಕಾದ ಅಗತ್ಯವಿದೆ ಎಂದು ಹೇಳಿದರು.

ಜಾಗೃತಿ ಜಾಥಾ ಉದ್ಘಾಟಿಸಿದ ಸಭಾಪತಿ ಪ್ರೊ. ಬಿ.ಕೆ. ಚಂದ್ರಶೇಖರ್, ರಕ್ತದಾನ ಶಿಬಿರಗಳಿಗೆ ಸರಕಾರ ಪ್ರೋತ್ಸಾಹ ನೀಡಬೇಕು ಎಂದರು. ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಭಾಗವಹಿಸಿದ್ದರು.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಗುರುವಾರ ನಗರದಲ್ಲಿ ಆಯೋಜಿಸಿದ್ದ ರಕ್ತದಾನ ಜಾಥವನ್ನು ವಿಧಾನಪರಿಷತ್ ಸಭಾಧ್ಯಕ್ಷ ಪ್ರೊ.ಬಿ.ಕೆ. ಚಂದ್ರಶೇಖರ್ ಉದ್ಘಾಟಿಸಿದರು.

ಸಂಯುಕ್ತ ಕರ್ನಾಟಕ ಬೆಂಗಳೂರು

15-6-2007



ಬೆಂಗಳೂರಿನ ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನ ಪ್ರಸಕ್ತ ಶೈಕ್ಷಣಿಕ ವರ್ಷದ ತರಗತಿ ಉದ್ಘಾಟನಾ ಕಾರ್ಯಕ್ರಮದಲ್ಲಿ ಸಾಹಿತಿ ಪ್ರೊ. ಟಿ. ಶ್ರೀನಿವಾಸರಾಜು, ಕೆ.ಎಂ. ನಂಜಪ್ಪ, ಪ್ರೊದೇ. ಪಿ. ಕೃಷ್ಣ, ಎಸ್. ವೀರಭದ್ರಯ್ಯ, ಕೃಷ್ಣಸ್ವಾಮಿ, ಕಾಲೇಜಿನ ಪ್ರಾಂಶುಪಾಲ ಪ್ರೊ. ಎನ್. ಬೈರೇಗೌಡ ಹಾಜರಿದ್ದರು.

ಪ್ರಜಾವಾಣಿ
ಗುರುವಾರ 14ನೇ ಜೂನ್ 2007



ಬೆಂಗಳೂರಿನಲ್ಲಿ ಇತ್ತೀಚೆಗೆ ನಡೆದ ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನ ಪ್ರಸಕ್ತ ಶೈಕ್ಷಣಿಕ ವರ್ಷದ ತರಗತಿಗಳ ಆರಂಭಕ್ಕೆ ಸಾಹಿತಿ ಪ್ರೊ. ಚಿ.ಶ್ರೀನಿವಾಸರಾಜು ದೀಪ ಬೆಳಗಿಸುವುದರ ಮೂಲಕ ಚಾಲನೆ ನೀಡಿದರು. ಕೆ.ಎಂ.ನಂಜಪ್ಪ, ಪ್ರೊ. ಪಿ.ಕೃಷ್ಣ, ಸಲಹಾ ಸಮಿತಿ ಅಧ್ಯಕ್ಷ ಎಸ್.ವೀರಭದ್ರಯ್ಯ, ಟ್ರಸ್ಟಿ ಕೃಷ್ಣಸ್ವಾಮಿ, ಪ್ರಾಂಶುಪಾಲ ಪ್ರೊ. ಎನ್.ಬೈರೇಗೌಡ ಚಿತ್ರದಲ್ಲಿದ್ದಾರೆ.

ಈ ಸಂಜೆ

14-06-2007, ಗುರುವಾರ




ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಕ್ತದಾನ ದಿನಾಚರಣೆ ಅಂಗವಾಗಿ ನಗರದಲ್ಲಿ ಆಯೋಜಿಸಿದ್ದ ಸ್ವಯಂ ಪ್ರೇರಿತ ರಕ್ತದಾನ ಜಾಗೃತಿ ಜಾಥಾವನ್ನು ವಿಧಾನ ಪರಿಷತ್ ಸಭಾಪತಿ ಪ್ರೊ. ಬಿ.ಕೆ.ಚಂದ್ರಶೇಖರ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ರೆಡ್‌ಕ್ರಾಸ್‌ನ ಪ್ರಧಾನ ಕಾರ್ಯದರ್ಶಿ ನಾರಾಯಣ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಸ್ವಯಂ ಸೇವಕರು ಭಾಗವಹಿಸಿ ಜಾಗೃತಿ ಮೂಡಿಸಿದರು.

ಸಂಜೆವಾಣಿ

ಗುರುವಾರ 14 ಜೂನ್ 2007




ವಿಶ್ವ ರಕ್ತದಾನಿಗಳ ದಿನಾಚರಣೆ ಅಂಗವಾಗಿ ಭಾರತೀಯ ರೆಡ್‌ಕ್ರಾಸ್ ಸೊಸೈಟಿಯ ಕರ್ನಾಟಕ ಶಾಖೆ ಹಮ್ಮಿಕೊಂಡಿದ್ದ ರ್‍ಯಾಲಿಯಲ್ಲಿ ವೈದ್ಯಕೀಯ ವಿದ್ಯಾರ್ಥಿನಿಯರು ಪಾಲ್ಗೊಂಡಿದ್ದರು.

# ರಕ್ತದಾನಕ್ಕೆ ಹೆಚ್ಚಿನ ಪ್ರೋತ್ಸಾಹ ಅಗತ್ಯ

ಬೆಂಗಳೂರು, ಜೂ. ೧೪- ರಕ್ತದಾನದ ಕಾರ್ಯಕ್ರಮಗಳು ಆಂದೋಲನದ ಮೂಲಕ ನಡೆಯುವ ಅಗತ್ಯವಿದ್ದು, ಇದಕ್ಕೆ ಸರ್ಕಾರದ ಪ್ರೋತ್ಸಾಹ ಸಿಗಬೇಕಿದೆ ಎಂದು ವಿಧಾನ ಪರಿಷತ್ ಸಭಾಪತಿ ಪ್ರೊ. ಬಿ.ಕೆ. ಚಂದ್ರಶೇಖರ್ ಇಂದಿಲ್ಲಿ ಹೇಳಿದರು.

ವಿಶ್ವ ರಕ್ತದಾನಿಗಳ ದಿನಾಚರಣೆಯ ಅಂಗವಾಗಿ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ವತಿಯಿಂದ ಹಮ್ಮಿಕೊಂಡಿದ್ದ ವಿಶ್ವ ರಕ್ತದಾನಿಗಳ ಆಚರಣೆಯ ರ್‍ಯಾಲಿಗೆ ಹಸಿರು ನಿಶಾನೆ ತೋರಿಸಿದ ಸಂದರ್ಭದಲ್ಲಿ ಅವರು ಮಾತನಾಡಿದರು.

ರಕ್ತ ಸಂಗ್ರಹಕ್ಕಾಗಿ ರೆಡ್ ಕ್ರಾಸ್ ಸಂಸ್ಥೆ ನಡೆಸುವ ಕಾರ್ಯಕ್ರಮಗಳಿಗೆ ಸರ್ಕಾರ ಅಭಯಹಸ್ತ ನೀಡಿ ಹೆಚ್ಚಿನ ಸಹಕಾರ ನೀಡಬೇಕಿದೆ ಎಂದರು.

ರೆಡ್ ಕ್ರಾಸ್ ಸಂಸ್ಥೆಯ ಉಪಸಭಾಧ್ಯಕ್ಷ ಉಡಪೆ ಕೃಷ್ಣ ಮಾತನಾಡಿ, ರಕ್ತದಾನಿಗಳನ್ನು ಪ್ರೋತ್ಸಾಹದ ಉದ್ದೇಶದಿಂದ ಇಂತಹ ಕಾರ್ಯಕ್ರಮಗಳನ್ನು ನಡೆಸುತ್ತಾ ಬರುತ್ತಿದ್ದು ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ರಕ್ತದಾನ ಮಾಡಲು ಮುಂದೆ ಬರಬೇಕಿದೆ ಎಂದರು.

ರೆಡ್ ಕ್ರಾಸ್ ಸಂಸ್ಥೆಯ ಕೋಶಾಧ್ಯಕ್ಷ ರಾಜುಚಂದ್ರಶೇಖರ್ ಮಾತನಾಡಿ, ರಾಜ್ಯದಲ್ಲಿ ಪ್ರಸ್ತುತ ಐದೂವರೆ ಲಕ್ಷ ಯೂನಿಟ್‌ನಷ್ಟು ರಕ್ತದ ಬೇಡಿಕೆ ಇದೆ. ಆದರೆ ಈಗ 3.6 ಲಕ್ಷ ಯೂನಿಟ್ ರಕ್ತ ಲಭ್ಯವಾಗುತ್ತಿದ್ದು. ಇನ್ನೂ ಅಗತ್ಯವಿರುವ ರಕ್ತ ಸಂಗ್ರಹಕ್ಕೆ ಆಂದೋಲನದ ರೂಪದಲ್ಲಿ ಕಾರ್ಯಕ್ರಮಗಳು ನಡೆಯಬೇಕಿದೆ ಎಂದರು.

ವರ್ಷಕ್ಕೆ ಮೂರು ಬಾರಿ ರಕ್ತದಾನ ಮಾಡುವುದರಿಂದ ಹೃದಯಾಘಾತಕ್ಕೆ ಒಳಗಾಗುವುದನ್ನು ತಡೆಗಟ್ಟಬಹುದಾಗಿದ್ದು, ಸಾರ್ವಜನಿಕರು ಈ ಹಿನ್ನೆಲೆಯಲ್ಲಿ ಸ್ವಯಂಪ್ರೇರಣೆಯಿಂದ ರಕ್ತದಾನ ಮಾಡಲು ಮುಂದೆ ಬರಬೇಕು ಎಂದರು.

ಈ ಸಂದರ್ಭದಲ್ಲಿ ರೆಡ್ ಕ್ರಾಸ್ ಸಂಸ್ಥೆ ಆಡಳಿತ ಮಂಡಳಿ ಪ್ರಧಾನ ಕಾರ್ಯದರ್ಶಿ. ಡಾ. ಎನ್.ಜಿ. ನಾರಾಯಣ, ಸದಸ್ಯರಾದ ನಾಗರಾಜು, ಸರೋಜಮ್ಮ ಡಾ.ಎನ್.ಎ. ಸುರೇಶ್ ಮತ್ತಿತರರು ಉಪಸ್ಥಿತರಿದ್ದರು.

ವಿವಿಧ ಕಾಲೇಜುಗಳ ವಿದ್ಯಾರ್ಥಿಗಳು ರ್‍ಯಾಲಿಯಲ್ಲಿ ಪಾಲ್ಗೊಂಡರು.

ವಿಜಯ ಕರ್ನಾಟಕ
ಶುಕ್ರವಾರ 1 ಜೂನ್ 2007

# ಪದ್ಮಾಗೆ ರೆಡ್‌ಕ್ರಾಸ್ ಚಿಕಿತ್ಸೆ

ವಿದ್ಯುತ್ ದುರ್ಘಟನೆಯಲ್ಲಿ ಕೈ ಕಳೆದುಕೊಂಡಿರುವ ಕೆ.ಆರ್.ಪುರದ ಪದ್ಮಾ ಭಟ್ಟಾಚಾರ್ಯ ಎಂಬ ಬಾಲಕಿಯ ಚಿಕಿತ್ಸೆಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯು ಆರ್ಥಿಕ ನೆರವು ನೀಡಿದೆ.



**ಬಾಲಕಿ ಪದ್ಮಾಳ ಚಿಕಿತ್ಸೆಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಡಬ್ಲ್ಯು.ಪಿ. ಕೃಷ್ಣ ಡಾ. ರಾಜು ಚಂದ್ರಶೇಖರ್, ಡಾ. ಎನ್.ಜಿ. ನಾರಾಯಣ ಮಗುವಿನ ತಾಯಿಗೆ ಚೆಕ್ ವಿತರಿಸಿದರು.**

ಬೆಂಗಳೂರು ವಿಜಯದಲ್ಲಿ ಮೇ 24ರಂದು 'ಹುಡುಗಾಟ ತರದಿರಲಿ ಕುತ್ತು' ಶೀರ್ಷಿಕೆಯಡಿ ಪ್ರಕಟವಾದ ವರದಿಗೆ ರೆಡ್‌ಕ್ರಾಸ್ ಸಂಸ್ಥೆ ಸ್ಪಂದಿಸಿದ್ದು, ಸಂಸ್ಥೆಯ ಮುಖ್ಯಸ್ಥರು ಕೆ.ಆರ್. ಆಸ್ಪತ್ರೆಯಲ್ಲಿ ದಾಖಲಾಗಿರುವ ಬಾಲಕಿಯನ್ನು ಭೇಟಿ ಮಾಡಿ ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಚಿಕಿತ್ಸೆಗೆ ವೆಚ್ಚವಾಗುವ ಸೂಕ್ತ ಮೊತ್ತದ ಹಣವನ್ನು ಚೆಕ್ ಮೂಲಕ ನೀಡಿ, ಕೃತಕ ಕೈ ಜೋಡಿಸಲು ಸಹಾಯ ಮಾಡುವುದಾಗಿ ಭರವಸೆ ನೀಡಿದರು.

ಈ ಸಂದರ್ಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಉಪ-ಸಭಾಧ್ಯಕ್ಷ ವೂಡೆ ಪಿ. ಕೃಷ್ಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್ ಹಾಗೂ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಅವರು ಪಾಲ್ಗೊಂಡಿದ್ದರು.

ಪ್ರಜಾವಾಣಿ ಬುಧವಾರ ಮೇ 30, 2007




ಮಂಗಳವಾರ ನಗರದ ಕೆ.ಆರ್. ಆಸ್ಪತ್ರೆಗೆ ಭೇಟಿ ನೀಡಿದ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಉಪಾಧ್ಯಕ್ಷ ವೂಡೆ ಪಿ. ಕೃಷ್ಣ ಅವರು ವಿದ್ಯುತ್ ಸ್ಪರ್ಶದಿಂದ ಕೈ ಕಳೆದುಕೊಂಡು ಚಿಕಿತ್ಸೆ ಪಡೆಯುತ್ತಿರುವ ಬಾಲಕಿ ಪದ್ಮಾ ಭಟ್ಟಾಚಾರ್ಯಳ ವೈದ್ಯಕೀಯ ಚಿಕಿತ್ಸೆಗಾಗಿ ಸಂಸ್ಥೆಯ ವತಿಯಿಂದ ಆರ್ಥಿಕ ನೆರವು ನೀಡಿದರು. ಸಂಸ್ಥೆಯ ಕೋಶಾಧ್ಯಕ್ಷ ರಾಜು ಚಂದ್ರಶೇಖರ್, ಕಾರ್ಯದರ್ಶಿ ಎನ್.ಜಿ. ನಾರಾಯಣ ಚಿತ್ರದಲ್ಲಿದ್ದಾರೆ.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಉಪಸಭಾಧ್ಯಕ್ಷ ಕೃಷ್ಣ, ಕೋಶಾಧ್ಯಕ್ಷ ಡಾ. ರಾಜು ಚಂದ್ರಶೇಖರ್, ಡಾ. ಎಸ್. ಜಿ. ನಾರಾಯಣ ಅವರುಗಳು ಸಂಸ್ಥೆಯ ರಾಜ್ಯ ಶಾಖೆಯ ಅಧ್ಯಕ್ಷರಾದ ರಾಜ್ಯಪಾಲ ಟಿ. ಎನ್. ಚತುರ್ವೇದಿ ಅವರನ್ನು ಭೇಟಿ ಮಾಡಿ ಮುಂದಿನ ಯೋಜನೆ ಹಾಗೂ ಕಾರ್ಯಕ್ರಮಗಳ ಬಗ್ಗೆ ಸುದೀರ್ಘ ಚರ್ಚೆ ನಡೆಸಿದರು.

ಬೆಂಗಳೂರು

ಭಾನುವಾರ 27 ಮೇ 2007



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ ನೂತನವಾಗಿ ಆಯ್ಕೆಯಾಗಿರುವ ಉಪ ಸಭಾಧ್ಯಕ್ಷ ವೂಡೆ ಪಿ. ಕೃಷ್ಣ, ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಹಾಗೂ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಸಂಸ್ಥೆಯ ರಾಜ್ಯ ಶಾಖೆಯ ಅಧ್ಯಕ್ಷರಾದ ರಾಜ್ಯಪಾಲ ಟಿ.ಎನ್. ಚತುರ್ವೇದಿ ಅವರನ್ನು ಭೇಟಿ ಮಾಡಿ ಚರ್ಚಿಸಿದರು.

ಈ ಸಂಜೆ
ಶುಕ್ರವಾರ, 25 ಮೇ, 2007




ವಿದ್ಯುತ್ ಸ್ಪರ್ಷದಿಂದ ಕೈಕಳೆದುಕೊಂಡ ಬಾಲಕಿ ಪದ್ಮಾಭಟ್ಟಾಚಾರ್ಯಳ ಚಿಕಿತ್ಸೆಗೆ ರೆಡ್‌ಕ್ರಾಸ್ ಸಂಸ್ಥೆ ವತಿಯಿಂದ ಆರ್ಥಿಕ ನೆರವನ್ನು ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಕೋಶಾಧ್ಯಕ್ಷ ಡಾ. ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್. ಜಿ. ನಾರಾಯಣ ಅವರುಗಳು ಮಗುವಿನ ತಾಯಿಗೆ ನೀಡಿದರು.

[redacted]



ಬೆಂಗಳೂರು

# ಆರೋಗ್ಯವರ್ಧನೆಗೆ ಯೋಗ ಶಿಕ್ಷಣ ಅಗತ್ಯ: ಪ್ರಕಾಶ್



'ಭಾರತ ಸೇವಾದಲ ಯೋಗ ಶಿಕ್ಷಣ ಪದ್ಧತಿ, ರಾಷ್ಟ್ರಧ್ವಜ-ರಾಷ್ಟ್ರಗೀತೆ' ಶಿಬಿರದ ಸಮಾರೋಪದಲ್ಲಿ ಸಚಿವ ಎಂ.ಪಿ. ಪ್ರಕಾಶ್, ಕೆ.ಆರ್. ಶ್ರೀನಿವಾಸನ್, ಯು.ಆರ್. ಸಭಾಪತಿ, ವೂಡೇ ಪಿ. ಕೃಷ್ಣ, ಎಚ್.ಎಂ. ಗುರುಸಿದ್ದಸ್ವಾಮಿ ಹಾಜರಿದ್ದರು.

ಬೆಂಗಳೂರು: ಮಾನವನ ಮಾನಸಿಕ ಹಾಗೂ ದೈಹಿಕ ಆರೋಗ್ಯವರ್ಧಿಸಲು ಯೋಗ ಶಿಕ್ಷಣ ಸಹಕಾರಿ ಎಂದು ಗೃಹ ಸಚಿವ ಎಂ.ಪಿ. ಪ್ರಕಾಶ್ ಅಭಿಪ್ರಾಯಪಟ್ಟಿದ್ದಾರೆ.

ಗೃಹ ಇಲಾಖೆ ಮತ್ತು ಭಾರತ ಸೇವಾದಲ ಕೇಂದ್ರ ಸಮಿತಿಯ ಸಂಯುಕ್ತಾಶ್ರಯದಲ್ಲಿ ನಗರದಲ್ಲಿ ನಡೆದ 'ಭಾರತ ಸೇವಾದಲ ಯೋಗ ಶಿಕ್ಷಣ ಪದ್ಧತಿ, ರಾಷ್ಟ್ರಧ್ವಜ-ರಾಷ್ಟ್ರಗೀತೆ' ಶಿಬಿರದ ಸಮಾರೋಪದಲ್ಲಿ ಅವರು ಮಾತನಾಡಿದರು.

ಯೋಗ ಶಿಕ್ಷಣ ಜೀವನದಲ್ಲಿ ಶಿಸ್ತು ಮೂಡಿಸುವುದರೊಂದಿಗೆ ಹಲವು ರೋಗಗಳಿಗೆ ಶಮನಕಾರಿಯೂ ಹೌದು. ಹೀಗಾಗಿ ಯೋಗ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಬೇಕು ಎಂದರು.

ಶಿಸ್ತು, ರಾಷ್ಟ್ರೀಯ ಭಾವೈಕ್ಯತೆ, ಕೋಮು ಸೌಹಾರ್ದತೆ, ಆಪತ್ಕಾಲದಲ್ಲಿ ಸಹಕಾರ ನೀಡುವ ಶಿಕ್ಷಣ ನೀಡುತ್ತಾ ಬಂದಿರುವ ಭಾರತ ಸೇವಾದಲ ಇದೀಗ ತನ್ನದೆ ಆದ ಯೋಗ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿದೆ. ಈ ಮೂಲಕ ಪೊಲೀಸ್ ಇಲಾಖೆಗೆ ಯೋಗ, ರಾಷ್ಟ್ರಧ್ವಜ-ರಾಷ್ಟ್ರಗೀತೆಗಳ ಬಗ್ಗೆ ಶಿಕ್ಷಣ ನೀಡಿ ಗೃಹ ಇಲಾಖೆಗೆ ಉತ್ತಮ ಸಹಕಾರ ನೀಡಿರುವುದಕ್ಕಾಗಿ ಭಾರತ ಸೇವಾದಲವನ್ನು ಅವರು ಅಭಿನಂದಿಸಿದರು.

ಪೊಲೀಸ್ ಮಹಾ ನಿರ್ದೇಶಕ ಕೆ.ಆರ್. ಶ್ರೀನಿವಾಸನ್ ಮಾತನಾಡಿ, ಪೊಲೀಸ್ ಇಲಾಖೆಗೆ ಯೋಗ ಶಿಕ್ಷಣವನ್ನು ಖಡ್ಡಾಯವಾಗಿ ಜಾರಿಗೊಳಿಸಲಾಗಿದ್ದು, ಇದೀಗ ಭಾರತ ಸೇವಾದಲ ಸಂಸ್ಥೆ ನಡೆಸಿದ ಈ ಕಾರ್ಯಕ್ರಮದಿಂದಾಗಿ ಪೊಲೀಸ್ ಇಲಾಖೆಗೆ ಒಳ್ಳೆಯ ಗೌರವ ಲಭಿಸಿದೆ ಎಂದು ತಿಳಿಸಿದರು.

ಭಾರತ ಸೇವಾದಲದ ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ 2007-08ನೇ ಶೈಕ್ಷಣಿಕ ವರ್ಷದಲ್ಲಿ 33 ಸಾವಿರ ಜನ ಶಿಕ್ಷಕರಿಗೆ ಮತ್ತು ಆ ಮೂಲಕ ರಾಜ್ಯದ ಒಂದು ಕೋಟಿ ವಿದ್ಯಾರ್ಥಿಗಳಿಗೆ ಯೋಗ ಶಿಕ್ಷಣವನ್ನು ನೀಡತಕ್ಕ ಬೃಹತ್ ಯೋಜನೆಯೊಂದನ್ನು ಭಾರತ ಸೇವಾದಲ ರೂಪಿಸಿಕೊಂಡಿದೆ ಎಂದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ಮುಂದಿನ ದಿನಗಳಲ್ಲಿ ಭಾರತ ಸೇವಾದಲ ಮತ್ತು ರೆಡ್‌ಕ್ರಾಸ್ ಸಂಸ್ಥೆ ಜಂಟಿಯಾಗಿ ಕಾರ್ಯಕ್ರಮಗಳನ್ನು ನಿರ್ವಹಿಸಲಿದೆ ಎಂದು ತಿಳಿಸಿದರು.

ಇದೇ ಸಂದರ್ಭದಲ್ಲಿ ರಾಜ್ಯದ ಸಂಪನ್ಮೂಲ ಯೋಗ ಶಿಕ್ಷಕ ಎಂ.ಎಸ್. ನಾಗರಾಜರಾವ್ ಅವರಿಗೆ ಎಂ.ಪಿ. ಪ್ರಕಾಶ್ ಅವರು ಇಲಾಖೆ ವತಿಯಿಂದ ಕಿರುಕಾಣಿಕೆ ನೀಡಿ ಗೌರವಿಸಿದರು. ನಂತರ 352 ಮಂದಿ ಪೊಲೀಸ್ ಸಿಬ್ಬಂದಿ 15 ನಿಮಿಷಗಳವರೆಗೆ ನಾನಾ ಆಸನಗಳ ಪ್ರದರ್ಶನ ನೀಡಿದರು.

ಇದೇ ಸಂದರ್ಭದಲ್ಲಿ ಭಾರತ ಸೇವಾದಲ ನಡೆಸಿದ ಪರೀಕ್ಷೆಯಲ್ಲಿ ಉತ್ಕೃಷ್ಟ ಅಂಕಗಳನ್ನು ಪಡೆದ ಮತ್ತು ಭಾಗವಹಿಸಿದ ಎಲ್ಲಾ ಶಿಬಿರಾರ್ಥಿಗಳಿಗೆ ಪುರಸ್ಕಾರ ಪ್ರಮಾಣ ಪತ್ರಗಳನ್ನು ನೀಡಲಾಯಿತು.

ಭಾರತ ಸೇವಾದಲದ ಅಧ್ಯಕ್ಷ ಎಚ್.ಎಂ. ಗುರುಸಿದ್ದಸ್ವಾಮಿ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಸಂಸ್ಥೆಯ ಅಖಿಲ ಭಾರತ ಸಂಚಾಲಕ ಸುಭಾಷ್‌ರೆಡ್ಡಿ ಪಾಟೀಲ್, ಉಪಾಧ್ಯಕ್ಷ ಬಿ.ಸಿ. ವೆಂಕಟೇಶ್, ಎಚ್.ಎಸ್. ಬಳ್ಳಾರಿ, ಸಂಘಟನಾ ಕಾರ್ಯದರ್ಶಿ ಎಚ್.ಎಚ್. ದೇವರಾಜ್, ಕೇಂದ್ರ ಸಮಿತಿ ಸದಸ್ಯರಾದ ಹಿಮಂತರಾಜ್, ಬಿ.ಸಿ. ಸಂಜೀವಮೂರ್ತಿ, ಶಂಕರ್ ಪಿ. ಮೊಗದ, ದ್ಯಾಮಣ್ಣ ಚಿಲವಾಡಗಿ, ಶಿವನಗೌಡ ಪಾಟೀಲ್ ಬಿರಾದಾರ್, ಯೋಜನಾಧಿಕಾರಿ ಎಸ್. ಲಿಂಗಪ್ಪ ಅತಿಥಿಗಳಾಗಿ ಭಾಗವಹಿಸಿದ್ದರು.

ಪೊಲೀಸ್ ತರಬೇತಿ ಕೇಂದ್ರದ ಪ್ರಾಚಾರ್ಯ ಶ್ರೀನಿವಾಸ ಅಯ್ಯರ್ ಸ್ವಾಗತಿಸಿದರು. ಬೆಂಗಳೂರು ನಗರ ಜಿಲ್ಲಾ ಸಂಘಟಕ ಮಹೇಶ್‌ಗೌಡ ಕಾರ್ಯಕ್ರಮ ನಿರೂಪಿಸಿದರು. ಸಂಸ್ಥೆಯ ದಲಪತಿ ಡಿ.ಎಫ್. ಹಳ್ಳಪ್ಪನವರ್ ವಂದಿಸಿದರು.

ಪ್ರಜಾವಾಣಿ

ಬುಧವಾರ
23ನೇ ಮೇ 2007

# ರಾಜಾರಾಂ ಮೋಹನ್ ರಾಯ್ ಸ್ಮರಣೆ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಹಿಂದೆ ಆಚರಣೆಯಲ್ಲಿದ್ದ ಅನಿಷ್ಟ ಪದ್ಧತಿ ವಿರುದ್ಧ ಹೋರಾಡಿದ ಮಹಾನ್ ವ್ಯಕ್ತಿ ರಾಜಾರಾಂ ಮೋಹನ್ ರಾಯ್. ಅವರ ನೆನಪು ಮಾಡಿಕೊಳ್ಳುತ್ತಿರುವುದು ಶ್ಲಾಘನೀಯ ಕಾರ್ಯ ಎಂದು ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವ ರಾಮಚಂದ್ರಗೌಡ ಹೇಳಿದರು.

ಬೆಂಗಳೂರು ಬ್ರಹ್ಮ ಸಮಾಜ ಹಮ್ಮಿಕೊಂಡಿದ್ದ ಬ್ರಹ್ಮ ಸಮಾಜದ ಸಂಸ್ಥಾಪಕ ರಾಜಾರಾಂ ಮೋಹನ್ ರಾಯ್ ಅವರ 235ಮೇ ಜನ್ಮ ದಿನಾಚರಣೆ ನಿಮಿತ್ತ ಅವರ ಪುತ್ಥಳಿಗೆ ಮಾಲಾರ್ಪಣೆ ಮಾಡಿ ಅವರು ಮಾತನಾಡಿದರು.

ಬುದ್ಧ, ಬಸವ ಮತ್ತು ಅಂಬೇಡ್ಕರರು ಕೂಡಾ ಇದೇ ದಿಕ್ಕಿನಲ್ಲಿ ಸಮಾಜದ ಉನ್ನತಿಗಾಗಿ ಶ್ರಮಿಸಿದ ಚೇತನಗಳು. ಒಂದೊಂದು ಶತಮಾನದಲ್ಲಿ ಒಬ್ಬೊಬ್ಬರು ಸಮಾಜ ಸುಧಾರಕರು ಬಂದು ಹೋಗಿದ್ದಾರೆ. ಅವರನ್ನು ಸ್ಮರಿಸುವುದು ನಮ್ಮೆಲ್ಲರ ಕರ್ತವ್ಯ ಎಂದು ನುಡಿದರು.

ಬ್ರಹ್ಮ ಸಮಾಜ ಕೇಂದ್ರ ಪರಿಷತ್ತಿನ ಅಧ್ಯಕ್ಷ ನರೇಂದ್ರನಾಥ್, ಎಸ್.ಪಿ. ಸಾರಥಿ, ಡಬ್ಲು.ಎಚ್.ದೇವಕುಮಾರ್, ಪಿ.ಕೃಷ್ಣ, ಡಾ.ಎಂ.ಗುರುದಾಸ್ ಇನ್ನಿತರ ಪದಾಧಿಕಾರಿಗಳು ಹಾಜರಿದ್ದರು.

ನಂತರ ಪತ್ರಕರ್ತರೊಂದಿಗೆ ಮಾತನಾಡಿದ ಅವರು, ಹೊನ್ನಾಳಿ ಶಾಸಕ ಎಂ.ಪಿ.ರೇಣುಕಾಚಾರ್ಯರದು ಮಾನವ ಹಜ ಪ್ರವೃತ್ತಿ. ಇಂತಹ ವಿಷಯಗಳೆಲ್ಲ ಬೀದಿಗೆ ಬರಬಾರದು ಎಂದು ಹೇಳಿದರು.



ಬ್ರಹ್ಮ ಸಮಾಜದ ಸ್ಥಾಪಕ ರಾಜಾರಾಮ ಮೋಹನ ರಾಯ್ ಅವರ ಹುಟ್ಟು ಹಬ್ಬದ ಪ್ರಯುಕ್ತ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವ ರಾಮಚಂದ್ರಗೌಡ ಹಾಗೂ ಬ್ರಹ್ಮ ಸಮಾಜದ ಅನುಯಾಯಿಗಳು ಬೆಂಗಳೂರಿನ ವುಡ್‌ಲ್ಯಾಂಡ್ಸ್ ಹೋಟೆಲ್ ಬಳಿಯಿರುವ ರಾಜಾರಾಮ ಮೋಹನ ರಾಯ್ ಅವರ ಪ್ರತಿಮೆಗೆ ಪುಷ್ಪ ಅರ್ಪಿಸಿದರು.
–ಪ್ರಜಾವಾಣಿ ಚಿತ್ರ

# ರಾಯ್ ಚಿರಂತನ ಮಹಾಪುರುಷ: ರಾಮಚಂದ್ರೇಗೌಡ

ಬೆಂಗಳೂರು, ಮೇ 22: ಭಾರತೀಯ ಸಮಾಜದಲ್ಲಿದ್ದ ಕೆಟ್ಟ ಪದ್ಧತಿಯನ್ನು ಹೋಗಲಾಡಿಸಲು ಶ್ರಮಿಸಿದ ರಾಜರಾಮಮೋಹನರಾಯ್ ಚಿರಂತನ ಮಹಾಪುರುಷ ಎಂದು ವಿಜ್ಞಾನ ಮತ್ತು ತಂತ್ರಜ್ಞಾನ ಖಾತೆ ಸಚಿವ ರಾಮಚಂದ್ರೇಗೌಡ ಬಣ್ಣಿಸಿದರು.

ಬೆಂಗಳೂರು ಬ್ರಹ್ಮಸಮಾಜ ಆಯೋಜಿಸಿದ್ದ ರಾಜರಾಮಮೋಹನರಾಯರ 235ನೇ ಜನ್ಮ ದಿನೋತ್ಸವದ ಅಂಗವಾಗಿ ಇಂದು ರಾಜರಾಮ ಮೋಹನರಾಯ್ ರಸ್ತೆಯಲ್ಲಿರುವ ರಾಯರ ಪ್ರತಿಮೆಗೆ ಮಾಲಾರ್ಪಣೆ ಮಾಡಿ ಮಾತನಾಡಿದರು.

ಬುದ್ಧ ಬಸವ,ಅಂಬೇಡ್ಕರ್ ಈ ಸಮಾಜದ ಪರಿವರ್ತನೆಗೆ ಸಾಕಷ್ಟು ಕೊಡುಗೆ ನೀಡಿದ್ದಾರೆ. ಅವರ ಹಾದಿಯಲ್ಲಿಯೇ ನಡೆದ ರಾಜರಾಮ ಮೋಹನರಾಯರು ಭಾರತೀಯ ಸಮಾಜದ ಬದಲಾವಣೆಗೆ ಅಮೂಲ್ಯ ಕೊಡುಗೆ ನೀಡಿದ್ದಾರೆ ಎಂದು ಸ್ಮರಿಸಿದರು.

ಒಂದೊಂದು ಶತಮಾನದಲ್ಲಿ ಒಬ್ಬೊಬ್ಬರು ಮಹಾಪುರುಷರು ಹುಟ್ಟಿ ಸಮಾಜ ಸುಧಾರಣೆ ಮಾಡಿದ್ದಾರೆ. ಈ ದೇಶದ ಜನ ಅಂತಹ ಮಹಾಪುರುಷರನ್ನು ಸ್ಮರಿಸಿಕೊಳ್ಳುವ ಅಗತ್ಯವಿದೆ ಎಂದು ಹೇಳಿದರು.

ಬ್ರಹ್ಮ ಸಮಾಜ ಕೇಂದ್ರ ಪರಿಷತ್ತಿನ ಅಧ್ಯಕ್ಷ ನರೇಂದ್ರನಾಥ್, ಸಮಾಜದ ಅಧ್ಯಕ್ಷ ಎಸ್.ಪಿ.ಸಾರಥಿ, ಗೌರವಕಾರ್ಯದರ್ಶಿ ಡಬ್ಲ್ಯೂ.ಎಚ್. ದೇವಕುಮಾರ್, ನವಗರ ಬ್ರಹ್ಮಸಮಾಜದ ಕಾರ್ಯದರ್ಶಿ ವೂಡೇ ಕೃಷ್ಣ, ಬಸವನಗುಡಿ ಬ್ರಹ್ಮಸಮಾಜದ ಅಧ್ಯಕ್ಷ ಡಾ.ಎಂ. ಗುರುದಾಸ್ ಮೊದಲಾದವರಿದ್ದರು.



ಬೆಂಗಳೂರಿನಲ್ಲಿ ಮಂಗಳವಾರ ಏರ್ಪಡಿಸಿದ್ದ ರಾಜಾರಾಂ ಮೋಹನ್‌ರಾಯ್ ಜಯಂತಿ ಕಾರ್ಯಕ್ರಮದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವ ರಾಮಚಂದ್ರಗೌಡ ರಾಜಾರಾಂ ಪ್ರತಿಮೆಗೆ ಮಾಲಾರ್ಪಣೆ ಮಾಡಿದರು.

ಗುರುವಾರ 17ನೇ ಮೇ 2007

ಪ್ರಜಾವಾಣಿ




ಯಲಹಂಕದಲ್ಲಿರುವ ಸಶಸ್ತ್ರ ಪೊಲೀಸ್ ತರಬೇತಿ ಕೇಂದ್ರದಲ್ಲಿ ಇತ್ತೀಚೆಗೆ ನಡೆದ ಭಾರತ ಸೇವಾದಲ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಮಾಜಿ ಶಾಸಕ ಯು.ಆರ್.ಸಭಾಪತಿ ಮಾತನಾಡಿದರು. ಸಂಸ್ಥೆಯ ದಳಪತಿ ಡಿ.ಎಫ್.ಹಳ್ಳಪ್ಪನವರ್, ಪೊಲೀಸ್ ತರಬೇತಿ ಕೇಂದ್ರದ ಪ್ರಾಂಶುಪಾಲ ಶ್ರೀನಿವಾಸ್ ಅಯ್ಯರ್, ಸೇವಾದಲ ಉಪಾಧ್ಯಕ್ಷ ಬಿ.ಸಿ.ವೆಂಕಟೇಶ್, ಗೃಹ ಸಚಿವ ಎಂ.ಪಿ.ಪ್ರಕಾಶ್, ಪೊಲೀಸ್ ಮಹಾನಿರ್ದೇಶಕ ಕೆ.ಆರ್.ಶ್ರೀನಿವಾಸನ್, ಸಂಚಾಲಕ ಸುಭಾಷ್‌ರೆಡ್ಡಿ ಪಾಟೀಲ್, ಸಂಘಟನಾ ಕಾರ್ಯದರ್ಶಿ ಎಚ್.ಎಚ್.ದೇವರಾಜ್ ಪಾಲ್ಗೊಂಡಿದ್ದರು.

ಕನ್ನಡಪ್ರಭ, ಗುರುವಾರ, 17 ಮೇ 2007



**ಸಿಎಂ ಭೇಟಿ**

ಭಾರತೀಯ ರೆಡ್ ಕ್ರಾಸ್‌ನ ರಾಜ್ಯ ಘಟಕದ ನೂತನ ಉಪಾಧ್ಯಕ್ಷ ಡಬ್ಲ್ಯೂ.ಪಿ.ಕೃಷ್ಣ ಮತ್ತು ಕೋಶಾಧ್ಯಕ್ಷ ಡಾ|ರಾಜು ಚಂದ್ರಶೇಖರ್ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರನ್ನು ಭೇಟಿ ಮಾಡಿ, ಮಾತುಕತೆ ನಡೆಸಿದರು.

ಸಂಜೆವಾಣಿ

ಬುಧವಾರ 16 ಮೇ 2007



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಗೆ ಇತ್ತೀಚೆಗೆ ಆಯ್ಕೆಯಾದ ಉಪಸಭಾಧ್ಯಕ್ಷ ವೂಡೇ ಪಿ. ಕೃಷ್ಣ ಹಾಗೂ ಗೌ. ಕೋಶಾಧ್ಯಕ್ಷ ರಾಜು ಚಂದ್ರಶೇಖರ್ ಅವರನ್ನು ಸಂಸ್ಥೆಯ ಉಪಾಧ್ಯಕ್ಷರಾದ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಅಭಿನಂದಿಸಿದ ಸಂದರ್ಭ.

ಈ ಸಂಜೆ
ಬುಧವಾರ | 16 ಮೇ 2007



ಭಾರತೀಯ ರೆಡ್‌ಕ್ರಾಸ್ ಸಂಸ್ಥೆ- ಕರ್ನಾಟಕ ಶಾಖೆಗೆ ಇತ್ತೀಚೆಗೆ ಆಯ್ಕೆಯಾದ ಉಪ ಸಭಾಧ್ಯಕ್ಷರಾಗಿ ಪೂಜೇ ಪಿ.ಕೃಷ್ಣ ಹಾಗೂ ಗೌರವ ಕೋಶಾಧ್ಯಕ್ಷರಾಗಿ ರಾಜುಚಂದ್ರಶೇಖರ್ ಅವರು ಸನ್ಮಾನ್ಯ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿಯವರನ್ನು ಭೇಟಿ ಮಾಡಿ ಮಾತುಕತೆ ನಡೆಸಿದರು.




ವಿಶ್ವ ರೆಡ್ ಕ್ರಾಸ್ ದಿನಾಚರಣೆ ಸಂದರ್ಭದಲ್ಲಿ ಆರೋಗ್ಯ ಸಚಿವ ಆರ್. ಅಶೋಕ್ ತುಮಕೂರು ರೆಡ್ ಕ್ರಾಸ್ ಜಿಲ್ಲಾ ಘಟಕದ ಅತ್ಯುತ್ತಮ ಸೇವೆಗಾಗಿ ಪ್ರಶಸ್ತಿ ಹಾಗೂ ಪ್ರಶಂಸಾ ಪತ್ರವನ್ನು ಜಿಲ್ಲಾಧಿಕಾರಿ ಉಮಾಶಂಕರ್ ಅವರಿಗೆ ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ರೆಡ್ ಕ್ರಾಸ್ ಉಪಾಧ್ಯಕ್ಷ ವೂಡೇ.ಪಿ. ಕೃಷ್ಣ ಹಾಗೂ ಗೌರವ ಖಜಾಂಚಿ ರಾಜು ಚಂದ್ರಶೇಖರ್, ಎಂ.ವಿ. ರಾಮಚಂದ್ರ ಮತ್ತಿತರರು ಉಪಸ್ಥಿತರಿದ್ದರು.



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯು ವಿಶ್ವ ರೆಡ್‌ಕ್ರಾಸ್ ದಿನಾಚರಣೆಯನ್ನು ಬೆಂಗಳೂರಿನಲ್ಲಿ ನಡೆಸಿದರು. ಆ ಸಂದರ್ಭದಲ್ಲಿ 'ಅತ್ಯುತ್ತಮ ಸೇವೆ' ಪ್ರಶಸ್ತಿಯನ್ನು ತುಮಕೂರು ರೆಡ್‌ಕ್ರಾಸ್ ಶಾಖೆ ಪಡೆಯಿತು. ಜಿಲ್ಲಾಧಿಕಾರಿ ಉಮಾಶಂಕರ್ ಅವರು ಆರೋಗ್ಯ ಸಚಿವ ಆರ್. ಅಶೋಕ್‌ರಿಂದ ಸ್ವೀಕರಿಸಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಊಡೇ ಪಿ. ಕೃಷ್ಣ ಗೌರವ ಖಜಾಂಚಿ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.

ಪ್ರಜಾವಾಣಿ

ಗುರುವಾರ 10ನೇ ಮೇ 2007



ವಿಶ್ವ ರೆಡ್‌ಕ್ರಾಸ್ ಸಂಸ್ಥೆ ದಿನಾಚರಣೆ ಅಂಗವಾಗಿ ಬುಧವಾರ ಬೆಂಗಳೂರಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಸಂಸ್ಥೆಯ ತುಮಕೂರು ಶಾಖೆಯು ಸಲ್ಲಿಸಿದ ಅತ್ಯುತ್ತಮ ಸೇವೆಗಾಗಿ ಸಚಿವ ಆರ್.ಅಶೋಕ್ ತುಮಕೂರು ಜಿಲ್ಲಾಧಿಕಾರಿ ಉಮಾಶಂಕರ್ ಅವರಿಗೆ ಪ್ರಶಸ್ತಿ ಹಾಗೂ ಪ್ರಶಂಸಾ ಪತ್ರವನ್ನು ನೀಡಿದರು. ಸಂಸ್ಥೆಯ ಉಪಸಭಾಧ್ಯಕ್ಷ ಉಡುಪಿ ಕೃಷ್ಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್ ಹಾಗೂ ಇತರರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.




ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕ ಶಾಖೆಯು ವಿಶ್ವ ರೆಡ್‌ಕ್ರಾಸ್ ದಿನಾಚರಣೆಯನ್ನು ಬೆಂಗಳೂರಿನಲ್ಲಿ ನಡೆಸಿದರು. ಆ ಸಂದರ್ಭದಲ್ಲಿ 'ಅತ್ಯುತ್ತಮ ಸೇವೆ' ಪ್ರಶಸ್ತಿಯನ್ನು ತುಮಕೂರು ರೆಡ್‌ಕ್ರಾಸ್ ಶಾಖೆ ಪಡೆಯಿತು. ಜಿಲ್ಲಾಧಿಕಾರಿ ಉಮಾಶಂಕರ್ ಅವರು ಆರೋಗ್ಯ ಸಚಿವ ಆರ್. ಅಶೋಕ್‌ರಿಂದ ಸ್ವೀಕರಿಸಿದರು. ರಾಜ್ಯ ರೆಡ್‌ಕ್ರಾಸ್ ಉಪಾಧ್ಯಕ್ಷ ಊಡೇ ಪಿ. ಕೃಷ್ಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.

UDAYAVANI - 10-05-2007

EESANJE

ವಾರ, 11 ಮೇ 2007




...ಶ್ವ ರೆಡ್ ಕ್ರಾಸ್ ದಿನಾಚರಣೆ ಸಂದರ್ಭದಲ್ಲಿ ಆರೋಗ್ಯ ಸಚಿವ ಆರ್. ಅಶೋಕ್ ತುಮಕೂರು ರೆಡ್ ಕ್ರಾಸ್ ...ಟಕದ ಅತ್ಯುತ್ತಮ ಸೇವೆಗಾಗಿ ಪ್ರಶಸ್ತಿ ಹಾಗೂ ಪ್ರಶಂಸಾ ಪತ್ರವನ್ನು ಜಿಲ್ಲಾಧಿಕಾರಿ ಉಮಾಶಂಕರ್ ಅವರಿಗೆ ...ಡಿ ಗೌರವಿಸಿದರು. ಈ ಸಂದರ್ಭದಲ್ಲಿ ರೆಡ್ ಕ್ರಾಸ್ ಉಪಾಧ್ಯಕ್ಷ ವೂಡೇ.ಪಿ. ಕೃಷ್ಣ ಹಾಗೂ ಗೌರವ ಖಜಾಂಚಿ ...ಜು ಚಂದ್ರಶೇಖರ್, ಎಂ.ವಿ. ರಾಮಚಂದ್ರ ಮತ್ತಿತರರು ಉಪಸ್ಥಿತರಿದ್ದರು.




ವಿಶ್ವ ರೆಡ್‌ಕ್ರಾಸ್ ಸಂಸ್ಥೆ ದಿನಾಚರಣೆ ಅಂಗವಾಗಿ ಬುಧವಾರ ಬೆಂಗಳೂರಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಸಂಸ್ಥೆಯ ತುಮಕೂರು ಶಾಖೆಯು ಸಲ್ಲಿಸಿದ ಅತ್ಯುತ್ತಮ ಸೇವೆಗಾಗಿ ಸಚಿವ ಆರ್.ಅಶೋಕ್ ತುಮಕೂರು ಜಿಲ್ಲಾಧಿಕಾರಿ ಉಮಾಶಂಕರ್ ಅವರಿಗೆ ಪ್ರಶಸ್ತಿ ಹಾಗೂ ಪ್ರಶಂಸಾ ಪತ್ರವನ್ನು ನೀಡಿದರು. ಸಂಸ್ಥೆಯ ಉಪಸಭಾಧ್ಯಕ್ಷ ಉಡುಪಿ ಕೃಷ್ಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್ ಹಾಗೂ ಇತರರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. PRAJAVANI - 10-05-2007

# ಸ್ವಯಂ ರಕ್ತದಾನಕ್ಕೆ ಮುಂದಾಗಿ'

ಬೆಂಗಳೂರು, ಮೇ 8 - ರಾಜ್ಯದಲ್ಲಿ ರಕ್ತದಾನಿಗಳ ಕೊರತೆ ಇರುವುದರಿಂದ ಜನರು ಸ್ವಯಂ ರಕ್ತದಾನಕ್ಕೆ ಮುಂದಾಗಬೇಕು ಎಂದು ಆರೋಗ್ಯ ಸಚಿವ ಆರ್. ಅಶೋಕ್ ಹೇಳಿದ್ದಾರೆ.

ಪ್ರಸ್ತುತ ಶೇ.53 ರಷ್ಟು ಮಂದಿ ಸ್ವಯಂ ರಕ್ತದಾನ ಮಾಡುತ್ತಿದ್ದಾರೆ. ಸ್ವಯಂ ರಕ್ತದಾನದಿಂದ ಅಪಘಾತಗಳು ಸಂಭವಿಸಿದ ಸಂದರ್ಭಗಳಲ್ಲಿ ಸಂಬಂಧಿಕರಿಂದ ರಕ್ತ ಪಡೆಯುವುದು ತಪ್ಪುತ್ತದೆ ಎಂದು ಭಾರತೀಯ ರೆಡ್‌ಕ್ರಾಸ್ ಸೊಸೈಟಿ, ರೆಡ್‌ಕ್ರಾಸ್ ದಿನಾಚರಣೆ ಪ್ರಯುಕ್ತ ಆಯೋಜಿಸಿದ್ದ ಸಮಾರಂಭದಲ್ಲಿ ಮಂಗಳವಾರ ಹೇಳಿದರು.

ಸಮಾಜದಲ್ಲಿ ದ್ವೇಷಕ್ಕಾಗಿ ನಿತ್ಯ ರಕ್ತ ಚೆಲ್ಲುತ್ತಿದ್ದೇವೆ. ಅದಕ್ಕೆ ಬದಲು ಜೀವ ರಕ್ಷಣೆಗೆ ರಕ್ತದಾನ ಮಾಡ ಬೇಕು. ಒಂದು ಯೂನಿಟ್ ರಕ್ತದಿಂದ 3 ಜನರ ಪ್ರಾಣ ಕಾಪಾಡಬಹುದು. ಸರಕಾರದ ಜತೆಗೆ ರೆಡ್‌ಕ್ರಾಸ್ ಸೊಸೈಟಿ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಈ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಬೇಕು ಎಂದು ಹೇಳಿದರು.

ಉತ್ತಮ ಸಾಧನೆ ಮಾಡಿದ [illegible]ಯ ರೆಡ್‌ಕ್ರಾಸ್ ಸೊಸೈಟಿಯ [illegible]ೊಗ್ಗ, ತುಮಕೂರು, ಬೆಳಗಾವಿ, [illegible]ಡ್ಯ, ದಕ್ಷಿಣ ಕನ್ನಡ, ಧಾರವಾಡ ಜಿಲ್ಲಾ ಮತ್ತು ಕಡೂರು ತಾಲೂಕು ಶಾಖೆಗಳಿಗೆ ಪ್ರಶಸ್ತಿ ವಿತರಿಸಲಾಯಿತು.

ಸೊಸೈಟಿ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಸೇರಿದಂತೆ ಹಲವು ಗಣ್ಯರು ಪಾಲ್ಗೊಂಡಿದ್ದರು.




ಭಾರತೀಯ ರೆಡ್‌ಕ್ರಾಸ್ ಸೊಸೈಟಿ, ರೆಡ್‌ಕ್ರಾಸ್ ದಿನಾಚರಣೆ ಪ್ರಯುಕ್ತ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಆರೋಗ್ಯ ಸಚಿವ ಆರ್. ಅಶೋಕ್ ಮಂಗಳವಾರ ರಕ್ತದಾನ ಮಾಡಿದರು. ಸೊಸೈಟಿ ಉಪಾಧ್ಯಕ್ಷ ವೂಡೇ ಪಿ. ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ್ ಸೇರಿದಂತೆ ಹಲವು ಗಣ್ಯರು ಪಾಲ್ಗೊಂಡಿದ್ದರು.

VIJAYA KARNATAKA - 09-05-2007

BLR

# மந்திரி ரத்ததானம்



பெங்களூர் ரேஸ் கோர்ஸ் ரோட்டில் உள்ள ரெட்கிராஸ் பவனில், இந்திய செஞ்சிலுவை சங்கத்தின் கர்நாடக கிளை சார்பில் உலக செஞ்சிலுவை தின விழா நடந்தது. விழாவை தொடங்கி வைத்த சுகாதார துறை மந்திரி ஆர்.அசோக் அங்கு நடந்த ரத்ததான முகாமில் ரத்ததானம் செய்த போது எடுத்த படம். இந்திய செஞ்சிலுவை சங்க கர்நாடக கிளை துணைத் தலைவர் பி.கிருஷ்ணா, பொருளாளர் ராஜு சந்திரசேகர் ஆகியோர் அருகில் உள்ளனர். DINA THANTHI - 09.05.2007

# 'ಸ್ವಯಂ ರಕ್ತದಾನಕ್ಕೆ ಮುಂದಾಗಿ'

ಬೆಂಗಳೂರು, ಮೇ 8 - ರಾಜ್ಯದಲ್ಲಿ ರಕ್ತದಾನಿಗಳ ಕೊರತೆ ಇರುವುದರಿಂದ ಜನರು ಸ್ವಯಂ ರಕ್ತದಾನಕ್ಕೆ ಮುಂದಾಗಬೇಕು ಎಂದು ಆರೋಗ್ಯ ಸಚಿವ ಆರ್. ಅಶೋಕ್ ಹೇಳಿದ್ದಾರೆ.

ಪ್ರಸ್ತುತ ಶೇ.53 ರಷ್ಟು ಮಂದಿ ಸ್ವಯಂ ರಕ್ತದಾನ ಮಾಡುತ್ತಿದ್ದಾರೆ. ಸ್ವಯಂ ರಕ್ತದಾನದಿಂದ ಅಪಘಾತಗಳು ಸಂಭವಿಸಿದ ಸಂದರ್ಭಗಳಲ್ಲಿ ಸಂಬಂಧಿಕರಿಂದ ರಕ್ತ ಪಡೆಯುವುದು ತಪ್ಪುತ್ತದೆ ಎಂದು ಭಾರತೀಯ ರೆಡ್‌ಕ್ರಾಸ್ ಸೊಸೈಟಿ, ರೆಡ್‌ಕ್ರಾಸ್ ದಿನಾಚರಣೆ ಪ್ರಯುಕ್ತ ಆಯೋಜಿಸಿದ್ದ ಸಮಾರಂಭದಲ್ಲಿ ಮಂಗಳವಾರ ಹೇಳಿದರು.

ಸಮಾಜದಲ್ಲಿ ದ್ವೇಷಕ್ಕಾಗಿ ನಿತ್ಯ ರಕ್ತ ಚೆಲ್ಲುತ್ತಿದ್ದೇವೆ. ಅದಕ್ಕೆ ಬದಲು ಜೀವ ರಕ್ಷಣೆಗೆ ರಕ್ತದಾನ ಮಾಡ ಬೇಕು. ಒಂದು ಯೂನಿಟ್ ರಕ್ತದಿಂದ 3 ಜನರ ಪ್ರಾಣ ಕಾಪಾಡಬಹುದು. ಸರಕಾರದ ಜತೆಗೆ ರೆಡ್‌ಕ್ರಾಸ್ ಸೊಸೈಟಿ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಈ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಬೇಕು ಎಂದು ಹೇಳಿದರು.

ಉತ್ತಮ ಸಾಧನೆ ಮಾಡಿದ ಭಾರತೀಯ ರೆಡ್‌ಕ್ರಾಸ್ ಸೊಸೈಟಿಯ ಶಿವಮೊಗ್ಗ, ತುಮಕೂರು, ಬೆಳಗಾವಿ, ಮಂಡ್ಯ, ದಕ್ಷಿಣ ಕನ್ನಡ, ಧಾರವಾಡ ಜಿಲ್ಲಾ ಮತ್ತು ಕಡೂರು ತಾಲೂಕು ಶಾಖೆಗಳಿಗೆ ಪ್ರಶಸ್ತಿ ವಿತರಿಸಲಾಯಿತು.

ಸೊಸೈಟಿ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಸೇರಿದಂತೆ ಹಲವು ಗಣ್ಯರು ಪಾಲ್ಗೊಂಡಿದ್ದರು.



ಭಾರತೀಯ ರೆಡ್‌ಕ್ರಾಸ್ ಸೊಸೈಟಿ, ರೆಡ್‌ಕ್ರಾಸ್ ದಿನಾಚರಣೆ ಪ್ರಯುಕ್ತ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಆರೋಗ್ಯ ಸಚಿವ ಆರ್. ಅಶೋಕ್ ಮಂಗಳವಾರ ರಕ್ತದಾನ ಮಾಡಿದರು. ಸೊಸೈಟಿ ಉಪಾಧ್ಯಕ್ಷ ವೊಡೇ ಪಿ. ಕೃಷ್ಣ, ಖಜಾಂಚಿ ರಾಜು ಚಂದ್ರಶೇಖರ್ ಸೇರಿದಂತೆ ಹಲವು ಗಣ್ಯರು ಪಾಲ್ಗೊಂಡಿದ್ದರು.

BLR

ಪ್ರಜಾವಾಣಿ

ಬುಧವಾರ 9ನೇ ಮೇ 2007

# 'ರಕ್ತದಾನಕ್ಕೆ ಮುಂದಾಗಿ'

ಪ್ರಜಾವಾಣಿ ವಾರ್ತೆ

ಬೆಂಗಳೂರು: ರಾಜ್ಯದಲ್ಲಿ ರಕ್ತದಾನಿಗಳ ಕೊರತೆಯಿದ್ದು, ಜೀವ ರಕ್ಷಣೆಗಾಗಿ ಜನರು ರಕ್ತದಾನ ಮಾಡಲು ಸ್ವಯಂಪ್ರೇರಿತರಾಗಿ ಮುಂದೆ ಬರಬೇಕು ಎಂದು ಆರೋಗ್ಯ ಸಚಿವ ಆರ್.ಅಶೋಕ್ ಹೇಳಿದರು.

ವಿಶ್ವ ರೆಡ್ ಕ್ರಾಸ್ ದಿನಾಚರಣೆ ಪ್ರಯುಕ್ತ ನಗರದ ರೆಡ್ ಕ್ರಾಸ್ ಭವನದಲ್ಲಿ ಮಂಗಳವಾರ ಹಮ್ಮಿಕೊಳ್ಳಲಾಗಿದ್ದ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ರಾಜ್ಯದಲ್ಲಿ ಸ್ವಯಂ ಪ್ರೇರಿತ ರಕ್ತದಾನಿಗಳಿಂದ ಶೇ 53ರಷ್ಟು ರಕ್ತವನ್ನು ಸಂಗ್ರಹಿಸಲಾಗುತ್ತಿದೆ. ಆದರೆ ಶೇ 47ರಷ್ಟು ರಕ್ತದ ಕೊರತೆ ಕಂಡು ಬರುತ್ತಿದೆ. ಇದನ್ನು ತಪ್ಪಿಸಲು ಜನರು ಸ್ವಯಂಪ್ರೇರಣೆಯಿಂದ ರಕ್ತದಾನ ಮಾಡಲು ಮುಂದಾಗಬೇಕು ಎಂದರು.

ಒಂದು ಯೂನಿಟ್ ರಕ್ತದಾನ ಮಾಡುವುದರಿಂದ ಮೂರು ಜನರ ಪ್ರಾಣ ಉಳಿಸಬಹುದು. ದ್ವೇಷದಿಂದ ರಕ್ತ ಚೆಲ್ಲುವ ಬದಲು ಪ್ರೀತಿಯಿಂದ ರಕ್ತ ಕೊಡುವ ಕಾರ್ಯಕ್ಕೆ ಮುಂದಾಗಬೇಕು ಎಂದು ಅವರು ಮನವಿ ಮಾಡಿದರು.

ರಕ್ತ ಸಂಗ್ರಹಣೆ ಹೆಚ್ಚಿಸುವ ನಿಟ್ಟಿನಲ್ಲಿ ರೆಡ್ ಕ್ರಾಸ್ ಅಲ್ಲದೇ ಸರ್ಕಾರೇತರ ಸಂಸ್ಥೆಗಳು ಸಹ ಪ್ರಮುಖ ಪಾತ್ರ ಬೀರಬೇಕು ಎಂದು ಅವರು ಹೇಳಿದರು.

ಇದೇ ಸಂದರ್ಭದಲ್ಲಿ ಉತ್ತಮ ಸಾಧನೆ ತೋರಿದ ರೆಡ್‌ಕ್ರಾಸ್ ಜಿಲ್ಲಾ ಶಾಖೆಗಳಿಗೆ ಪ್ರಶಸ್ತಿ ನೀಡಲಾಯಿತು. ಶಿವಮೊಗ್ಗ, ತುಮಕೂರು, ಬೆಳಗಾವಿ, ಮಂಡ್ಯ, ದಕ್ಷಿಣ ಕನ್ನಡ, ಧಾರವಾಡ ಜಿಲ್ಲೆ ಶಾಖೆಗಳ ಪ್ರತಿನಿಧಿಗಳು ಮತ್ತು ಕಡೂರು ತಾಲ್ಲೂಕಿನ ಪ್ರತಿನಿಧಿಗಳು ಪ್ರಶಸ್ತಿ ಸ್ವೀಕರಿಸಿದರು.

ರೆಡ್ ಕ್ರಾಸ್ ಸಂಸ್ಥೆ ರಾಜ್ಯ ಶಾಖೆಯ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ ನಾರಾಯಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್, ಉಪಸಭಾಧ್ಯಕ್ಷ ವೂಡೆ. ಪಿ.ಕೃಷ್ಣ, ತುಮಕೂರು ಜಿಲ್ಲಾಧಿಕಾರಿ ಎಸ್.ಆರ್.ಉಮಾಶಂಕರ್ ಇದ್ದರು.



ಭಾರತೀಯ ರೆಡ್‌ಕ್ರಾಸ್ ಸೊಸೈಟಿಯು ವಿಶ್ವ ರೆಡ್‌ಕ್ರಾಸ್ ದಿನದ ಅಂಗವಾಗಿ ಮಂಗಳವಾರ ಬೆಂಗಳೂರಿನ ರೇಸ್‌ಕೋರ್ಸ್ ರಸ್ತೆಯಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮವನ್ನು ಸಚಿವ ಆರ್.ಅಶೋಕ್ ರಕ್ತದಾನ ಮಾಡುವ ಮೂಲಕ ಉದ್ಘಾಟಿಸಿದರು. ಪ್ರಜಾವಾಣಿ ಚಿತ್ರ

# 'ಮಡಿಲು' ಯೋಜನೆಗೆ ಜೂನ್‌ನಲ್ಲಿ ಚಾಲನೆ

[illegible], ಮೇ 8: ತಾಯಿ ಮತ್ತು [illegible] ಸುರಕ್ಷತೆಗಾಗಿ ರಾಜ್ಯ ಸರ್ಕಾರ [illegible]' ಎನ್ನುವ ವಿನೂತನ ಕಾರ್ಯಕ್ರಮ [illegible] ಆರಂಭಿಸಲಿದೆ ಎಂದು ಆರೋಗ್ಯ ಸಚಿವ ಆರ್.ಅಶೋಕ್ ಇಂದು ಇಲ್ಲಿ ತಿಳಿಸಿದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ [illegible] ನಗರದಲ್ಲಿ ಏರ್ಪಡಿಸಿದ್ದ [illegible] ರೆಡ್‌ಕ್ರಾಸ್ ದಿನಾಚರಣೆಯನ್ನು ರಕ್ತ ನೀಡುವ ಮೂಲಕ ಉದ್ಘಾಟಿಸಿ, ಅವರು [illegible].

[illegible] ರಕ್ಷಣೆಗಾಗಿ ಸರ್ಕಾರ [illegible] 'ಜನನಿ' ಎಂಬ ಕಾರ್ಯಕ್ರಮ [illegible] ತಾಯಿ ಮತ್ತು ಮಕ್ಕಳ [illegible] ಮತ್ತು ಸುರಕ್ಷತೆಗಾಗಿ 'ಮಡಿಲು' [illegible] ವಿನೂತನ ಕಾರ್ಯಕ್ರಮವನ್ನು [illegible] ತಿಂಗಳಿಂದ ಆರಂಭಿಸಲಾಗುವುದು [illegible] ಹೇಳಿದರು.

ಮಡಿಲು ಕಾರ್ಯಕ್ರಮದಡಿಯಲ್ಲಿ ಹುಟ್ಟಿದ [illegible] ಅಗತ್ಯವಿರುವ ಸೊಳ್ಳೆಪರದೆ, ಪೌಡರ್ ಸೇರಿದಂತೆ ಇತರೆ ಅಗತ್ಯ ವಸ್ತುಗಳನ್ನು ನೀಡಲಾಗುವುದು ಎಂದು ಹೇಳಿದರು.

ಜನನಿ ಕಾರ್ಯಕ್ರಮದ ಅಡಿಯಲ್ಲಿ ಮಗುವಿಗೆ ಜನನ ನೀಡುವ ತಾಯಿ ರಕ್ಷಣೆಗಾಗಿ ಕಾರ್ಯಕ್ರಮ ರೂಪಿಸಲಾಗಿದೆ. ಹೆರಿಗೆ ಭತ್ಯೆ 750 ರೂ. ನೀಡಲಾಗುತ್ತಿದೆ. ಸಿಜರಿಯನ್ ಹೆರಿಗೆ ಆದ ಮಹಿಳೆಗೆ 1500 ರೂ. ಭತ್ಯೆ ನೀಡುತ್ತಿರುವುದಾಗಿ ಹೇಳಿದರು.

ತಾಯಿ ಮತ್ತು ಮಗುವಿನ ಆರೋಗ್ಯಕ್ಕಾಗಿ ಹಾಗೂ ಶಿಶು ಮತ್ತು ತಾಯಿಯ ಮರಣ ಪ್ರಮಾಣ ಕಡಿಮೆಗೊಳಿಸಲು ರಕ್ತದ ಅಗತ್ಯ ಇದೆ. ಇದಕ್ಕಾಗಿ ಅಗತ್ಯ ರಕ್ತವನ್ನು ಸಂಗ್ರಹಿಸುವ ಕೆಲಸ ತಾಲೂಕು ಮಟ್ಟದಲ್ಲಿ ಹೆಚ್ಚಿಗೆ ಆಗಬೇಕು ಎಂದು ಹೇಳಿದರು.

**ಕೊರತೆ:** ರಾಜ್ಯ ಶೇ.47 ರಷ್ಟು ರಕ್ತದ ಕೊರತೆಯನ್ನು ಎದುರಿಸುತ್ತಿದೆ. ಪ್ರಸ್ತುತ ಲಭ್ಯವಿರುವ ಶೇ.53 ರಷ್ಟು ರಕ್ತವನ್ನು ದಾನಿಗಳಿಂದ ಸಂಗ್ರಹಿಸಲಾಗುತ್ತಿದೆ. ಉಳಿದ ಶೇ.47ರಷ್ಟು ರಕ್ತದ ಅಗತ್ಯತೆಯನ್ನು ರೋಗಿಗಳ ಬಂಧುಗಳಿಂದಲೇ ಸಂಗ್ರಹಿಸಲಾಗುತ್ತಿದೆ ಎಂದು ಹೇಳಿದರು.

ರಕ್ತ ನೀಡುವುದಕ್ಕೆ ಭಯ, ಆತಂಕ ಪಡುವ ಅಗತ್ಯವಿಲ್ಲ. ರಕ್ತ ನೀಡಿದರೆ ಒಂದು ಜೀವವನ್ನು ಉಳಿಸಿದಂತಾಗುತ್ತದೆ. ಜೊತೆಗೆ ರಕ್ತ ಶುದ್ಧಿಯಾಗುತ್ತದೆ. ಹಣತೆಯಿಂದ ನೂರಾರು ಹಣತೆಯನ್ನು ಹೇಗೆ ಹಚ್ಚಬಹುದೋ ಅದೇ ರೀತಿಯಲ್ಲಿ ರಕ್ತದಾನದಿಂದ ಇನ್ನೊಂದು ಜೀವವನ್ನು ಉಳಿಸಬಹುದಾಗಿದೆ ಎಂದು ಹೇಳಿದರು.

ರಾಜ್ಯ ಎದುರಿಸುತ್ತಿರುವ ರಕ್ತದ ಕೊರತೆಯನ್ನು ಆಂದೋಲನ ಅಥವಾ ಸರ್ಕಾರ ಹಣ ನೀಡಿ ತುಂಬಲು ಸಾಧ್ಯವೇ ಇಲ್ಲ. ರಕ್ತದ ಕೊರತೆ ನೀಗಲು ಸಾರ್ವಜನಿಕರು, ಸರ್ಕಾರೇತರ ಸಂಸ್ಥೆಗಳು ರೆಡ್‌ಕ್ರಾಸ್‌ನಂತಹ ಸಂಸ್ಥೆಗೆ ಬೆಂಬಲ ನೀಡಿ, ಇವುಗಳ ಚಟುವಟಿಕೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಲ್ಲಿ ಮಾತ್ರ ರಕ್ತದ ಕೊರತೆ ನೀಗಲು ಸಾಧ್ಯ ಎಂದು ವಿಶ್ಲೇಷಿಸಿದರು.

ರಕ್ತ: ನಾವು ದ್ವೇಷಕ್ಕಾಗಿ ರಕ್ತ ಚೆಲ್ಲುತ್ತಿದ್ದೇವೆ. ದ್ವೇಷಕ್ಕಾಗಿ ನಾವು ರಕ್ತ ಚೆಲ್ಲುವ ಬದಲು ಪ್ರೀತಿಗಾಗಿ ರಕ್ತ ನೀಡುವ ಸ್ಥಿತಿ ನಿರ್ಮಾಣ ಆಗಬೇಕು ಎಂದು ಹೇಳಿದರು.

ಕಾರ್ಪೊರೇಟ್ ಸಂಸ್ಥೆಗಳು, ಸಂಸ್ಥೆಯಲ್ಲಿ ಸಿಬ್ಬಂದಿಗಳು ರೆಡ್‌ಕ್ರಾಸ್‌ನ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಆಗಬೇಕು. ಇದಕ್ಕೆ ಕಾರ್ಪೊರೇಟ್ ವಲಯ ಮುಂದಾಗಬೇಕು ಎಂದು ಹೇಳಿದರು.

ತುಮಕೂರು ಜಿಲ್ಲಾಪಂಚಾಯತಿ ಒಂದು ಲಕ್ಷರೂ.ಗಳ ದೇಣಿಗೆಯನ್ನು ಇದೇ ಸಂದರ್ಭದಲ್ಲಿ ರೆಡ್‌ಕ್ರಾಸ್ ಸಂಸ್ಥೆ ನೀಡಿತು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ವಿಭಾಗದ ಉಪಾಧ್ಯಕ್ಷ ವೊಡೆ ಪಿ.ಕೃಷ್ಣ, ಗೌರವ ಖಜಾಂಚಿ ರಾಜು ಚಂದ್ರಶೇಖರ್, ಪ್ರಧಾನ ಕಾರ್ಯದರ್ಶಿ ಡಾ| ಎನ್.ಜಿ.ನಾರಾಯಣ ಸೇರಿದಂತೆ ಇತರೆ ಗಣ್ಯರು ಉಪಸ್ಥಿತರಿದ್ದರು.



ರೆಡ್‌ಕ್ರಾಸ್ ಸೊಸೈಟಿ ವತಿಯಿಂದ ಬೆಂಗಳೂರಿನಲ್ಲಿ ಮಂಗಳವಾರ ಏರ್ಪಡಿಸಿದ್ದ ವಿಶ್ವ ರೆಡ್‌ಕ್ರಾಸ್ ದಿನಾಚರಣೆ ಕಾರ್ಯಕ್ರಮದಲ್ಲಿ ಆರೋಗ್ಯ ಸಚಿವ ಆರ್.ಅಶೋಕ್ ರಕ್ತದಾನ ಮಾಡಿದರು. ರಾಜು ಚಂದ್ರಶೇಖರ್, ವೊಡೆ ಪಿ.ಕೃಷ್ಣ, ಟಿ. ಪ್ರಭಾಕರ್ ಮತ್ತಿತರರು ಉಪಸ್ಥಿತರಿದ್ದರು.

# 'ನೀವ್ಯಾಕೆ ಮುಖ್ಯಮಂತ್ರಿ ಆಗಲಿಲ್ಲ?'

ಬೆಂಗಳೂರು, ಏ. 13 - 'ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡರ ಪುತ್ರ ಕುಮಾರಸ್ವಾಮಿ ಮುಖ್ಯಮಂತ್ರಿ ಆಗಿದ್ದಾರೆ. ಮಾಜಿ ಮುಖ್ಯಮಂತ್ರಿಗಳ ಪುತ್ರರಾದ ನಿಮಗೇಕೆ ಅದು ಸಾಧ್ಯವಾಗಲಿಲ್ಲ?'

ಈ ಪ್ರಶ್ನೆ ಎದುರಾಗಿದ್ದು ಶಾಸಕರಾದ ದಿನೇಶ್ ಗುಂಡೂರಾವ್ ಮತ್ತು ಮಹಿಮಾ ಪಟೇಲ್‌ಗೆ.

ಯಲಹಂಕ ಶೇಷಾದ್ರಿಪುರ ಪದವಿ ಕಾಲೇಜಿನಲ್ಲಿ ವಿವೇಕ ಯುಗ ಫೌಂಡೇಷನ್ ಬುಧವಾರ ಆಯೋಜಿಸಿದ್ದ 'ಶಾಸಕರು ಮತ್ತು ಯುವಕರು- ಒಂದು ಮುಖಾಮುಖಿ' ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳು ಮಾಜಿ ಮುಖ್ಯಮಂತ್ರಿಗಳ ಪುತ್ರರಿಗೆ ಈ ಸವಾಲು ಹಾಕಿದರು.

'ಪಕ್ಷದ ಬೆಂಬಲ ಮತ್ತು ಜನಬಲ ಇರುವವರು ಮುಖ್ಯಮಂತ್ರಿಯಾಗುತ್ತಾರೆ' ಎಂದು ಅವರು ಸಮಜಾಯಿಷಿ ನೀಡಿದರು.

ಕಾರ್ಯಕ್ರಮ ಉದ್ಘಾಟಿಸಿದ ಮುಖ್ಯಮಂತ್ರಿಯ ಸಂಸದೀಯ ಕಾರ್ಯದರ್ಶಿ ಮಹಿಮಾ ಪಟೇಲ್, 'ಭ್ರಷ್ಟಾಚಾರ ನಿರ್ಮೂಲನೆಯಲ್ಲಿ ಯುವಜನರ ಪಾತ್ರ ಮುಖ್ಯ. ರಾಜಕೀಯದ ದಿಕ್ಕನ್ನೇ ಬದಲಿಸುವ ಶಕ್ತಿ ಯುವಜನರಿಗಿದೆ. ಆದರೆ, ಯುವಜನರು ಮತದಾನಕ್ಕೆ ಒಲವು ತೋರುತ್ತಿಲ್ಲ. ಹೀಗಾದರೆ ರಾಜಕೀಯ ಬದಲಿಸುವವರು ಯಾರು?' ಎಂದು ಕೇಳಿದರು.

ಶಾಸಕ ದಿನೇಶ್ ಗುಂಡೂರಾವ್, 'ಯುವಕರಿಗೆ ರಾಜಕೀಯದಲ್ಲಿ ಆಸಕ್ತಿ ಇಲ್ಲದ ಕಾರಣ ರಾಜಕೀಯ ಕ್ಷೀಣಿಸುತ್ತಿದೆ' ಎಂದು ಹೇಳಿದರು.

'ಪೂಚಂತೇ ಅಂತ್ಯಸಂಸ್ಕಾರದಲ್ಲಿ ಮುಖ್ಯಮಂತ್ರಿ ಪಾಲ್ಗೊಳ್ಳದಿದ್ದುದು ಹಿರಿಯ ಸಾಹಿತಿಗೆ ಮಾಡಿದ ಅವಮಾನವಲ್ಲವೇ?' ಎಂಬ ಪ್ರಶ್ನೆಗೆ ಉತ್ತರಿಸಿದ ಶಾಸಕ ವಿಶ್ವೇಶ್ವರ ಹೆಗಡೆ ಕಾಗೇರಿ, 'ಪೂರ್ವನಿಯೋಜಿತ ಕಾರ್ಯಕ್ರಮಗಳಿಂದಾಗಿ ಮುಖ್ಯಮಂತ್ರಿ ಪಾಲ್ಗೊಳ್ಳಲು ಸಾಧ್ಯವಾಗದಿರಬಹುದು. ಸರಕಾರದ ಪರವಾಗಿ ಉಪಮುಖ್ಯಮಂತ್ರಿ ಯಡಿಯೂರಪ್ಪ ಭಾಗವಹಿಸಿದ್ದರು' ಎಂದರು.

ಶಾಸಕ ಎಚ್.ಸಿ. ಬಾಲಕೃಷ್ಣ, ವಿವೇಕ ಯುಗ ಪ್ರತಿಷ್ಠಾನದ ಡಿ.ಎಂ. ಹೆಗಡೆ, ಕಾಲೇಜು ಪ್ರಾಚಾರ್ಯ ಡಾ. ಎಂ. ಪ್ರಕಾಶ್, ಶೇಷಾದ್ರಿಪುರ ಶಿಕ್ಷಣ ದತ್ತಿಯ ಪೂಡೆ ಪಿ. ಕೃಷ್ಣ ಪಾಲ್ಗೊಂಡಿದ್ದರು.

ಕನ್ನಡಪ್ರಭ, ಬೆಂಗಳೂರು 9

ಶುಕ್ರವಾರ, 11 ಏಪ್ರಿಲ್ 2007

## ರೆಡ್‌ಕ್ರಾಸ್ ಸಂಸ್ಥೆಗೆ ಆಯ್ಕೆ

ಬೆಂಗಳೂರು: ಇತ್ತೀಚೆಗೆ ನಡೆದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಆಡಳಿತ ಮಂಡಳಿ ಸಭೆಯಲ್ಲಿ ಪ್ರೊಡೇ ಓ. ಕೃಷ್ಣ ಅವರನ್ನು ಉಪ ಸಭಾಧ್ಯಕ್ಷರನ್ನಾಗಿ ಹಾಗೂ ರಾಜು ಚಂದ್ರಶೇಖರ್ ಅವರನ್ನು ಗೌರವ ಕೋಶಾಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ಸಂಸ್ಥೆಯ ಸಭಾಧ್ಯಕ್ಷರೂ ಆಗಿರುವ ಆರೋಗ್ಯ ಸಚಿವ ಆರ್. ಅಶೋಕ್ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು.



ಈ ಸಂಜೆ




ಶೇಷಾದ್ರಿಪುರಂನ ಕಾನೂನು ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ವಾರ್ಷಿಕೋತ್ಸವ ಸಮಾರಂಭವನ್ನು ನ್ಯಾಯಮೂರ್ತಿ ಎಚ್. ಬಿಳ್ಳಪ್ಪ ಉದ್ಘಾಟಿಸಿದರು. ಕಾಲೇಜು ಪ್ರಾಂಶುಪಾಲರಾದ ಎ.ಜಿ. ಆಶಾ, ವಕೀಲರಾದ ಎನ್. ಮಂಜುಳಾದೇವಿ, ವಿ. ನಾರಾಯಣಸ್ವಾಮಿ ಇತರರು ಉಪಸ್ಥಿತರಿದ್ದರು.

13-3-2007 ಸಂಯುಕ್ತ ಕರ್ನಾಟಕ

ಅದು ಸ್ವಾತಂತ್ರ್ಯ ಚಳವಳಿ ಪರಾಕಾಷ್ಠೆಗೆ ತಲುಪಿದ್ದ ಕಾಲ. ಭಾರತವನ್ನಾಳುತ್ತಿದ್ದ ಬ್ರಿಟಿಷರಿಗೆ ಇಡೀ ದೇಶದ ತುಂಬಾ ಹರಡಿದ್ದ ಸ್ವಾತಂತ್ರ್ಯ ಚಳವಳಿಯ ಕಾವು. ಬಿಸಿ ಮುಟ್ಟಿಸಿದ್ದ ಕಾಲವದು.

ಮಕ್ಕಳು, ಯುವಜನರು ಚಳವಳಿಗೆ ಧುಮುಕಿದರು. ಇವರೆಲ್ಲರಿಗೂ ಸ್ಫೂರ್ತಿಯಾಗಿದ್ದವರು ರಾಷ್ಟ್ರಪಿತ ಮಹಾತ್ಮಾ ಗಾಂಧಿ. ಇಂಥದೇ ಒಂದು ಸಂದರ್ಭದಲ್ಲಿ 1923ರಲ್ಲಿ ಹುಟ್ಟಿಕೊಂಡ ಸಂಸ್ಥೆ ಹಿಂದೂಸ್ಥಾನಿ. ಸೇವಾದಳ, ಗಾಂಧೀಜಿಯವರ ಆದೇಶದಂತೆ ಇದನ್ನು ಸ್ಥಾಪಿಸಿದವರು ಪದ್ಮಭೂಷಣ ಡಾ. ನಾ.ಸು. ಹರ್ಡೀಕರ್. ಈ ಸಂಘಟನೆಯ ಪ್ರಥಮ ಅಧ್ಯಕ್ಷರು ಭಾರತದ ಪ್ರಥಮ ಪ್ರಧಾನಿಯೂ ಆದ ಹೆಗ್ಗಳಿಕೆಗೆ ಪಾತ್ರರಾದ ಪಂಡಿತ್ ಜವಹರಲಾಲ್ ನೆಹರೂರವರು.

1950ರಲ್ಲಿ ಹಾಸನ ಜಿಲ್ಲೆಯ ಬೇಲೂರಿನಲ್ಲಿ ನಡೆದ ಸಮ್ಮೇಳನದಲ್ಲಿ ಹಿಂದೂಸ್ಥಾನಿ ಸೇವಾದಳ 'ಭಾರತ ಸೇವಾದಳ' ಎಂದು ಹೊಸ ಹೆಸರು ಪಡೆದು ಪರಿವರ್ತನೆಗೊಂಡಿತು. ಈ ರೀತಿ ಪರಿವರ್ತನೆಗೊಂಡ ಪಕ್ಷಾತೀತ ಭಾರತ ಸೇವಾದಳದ ಪ್ರಥಮ ಅಧ್ಯಕ್ಷರು ಮಾಜಿ ಮುಖ್ಯಮಂತ್ರಿ ದಿ. ಕೆಂಗಲ್ ಹನುಮಂತಯ್ಯನವರು.




# ಸೇವೆಯಲ್ಲೇ ಸಾರ್ಥಕತೆ ಕಂಡುಕೊಂಡ ಸೇವಾದಳ

ಬೆಂಗಳೂರಿನ ಮಟ್ಟಿಗೆ ಸೇವಾದಳಕ್ಕೊಂದು ಇತಿಹಾಸವಿದೆ. ಶೇಷಾದ್ರಿಪುರಂ ಪ್ರೌಢಶಾಲೆಯಲ್ಲಿ ಭಾರತ ಸೇವಾದಳದ ಸರ್ವೋದಯ ಶಾಖೆ ಆರಂಭಗೊಂಡಿದ್ದು 1952ರಲ್ಲಿ ಇದನ್ನು ಆರಂಭಿಸಿದವರು ಕ.ಶ್ರೀ. ನಾರಾಯಣಮೂರ್ತಿ. ಈ ಸಂಘಟನೆಯಲ್ಲಿ ಪ್ರಥಮ ತಂಡದ ಕೇಂದ್ರ ನಾಯಕ ಪದವಿ ಪಡೆದ ಅವರು ದೈಹಿಕ ಶಿಕ್ಷಕರಾಗಿದ್ದರು. ಇವರಿಗೆ ಬೆಂಬಲ



ನೀಡಿ ಪ್ರೋತ್ಸಾಹಿಸಿದವರು ಅಂದು ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಸುಬ್ಬಣ್ಣನವರು ಮತ್ತು ನೇತಾಜಿ ಸುಭಾಷ್ ಚಂದ್ರಭೋಸರ ನಿಕಟವರ್ತಿ ಐ.ಎಸ್.ಎ. ರಾಮರಾಯರು. ಹೀಗೆ ಪ್ರಾರಂಭವಾದ ಶಾಖೆ ಬೆಳ್ಳಿಹಬ್ಬ ಆಚರಿಸಿ ಈಗ ಸುವರ್ಣ ಮಹೋತ್ಸವ ಸಡಗರದಲ್ಲಿದೆ.

ಶೇಷಾದ್ರಿಪುರಂ ಪ್ರೌಢಶಾಲೆಗೆ ಸ್ವಂತ ಕಟ್ಟಡ ಇಲ್ಲದಿದ್ದ ಸಂದರ್ಭದಲ್ಲಿ ಉದಯಿಸಿದ ಸೇವಾಸಂಸ್ಥೆ ಭಾರತ ಸೇವಾದಳ. ಕಟ್ಟಡ ನಿರ್ಮಾಣಕ್ಕೆ ನಂತರದ ದಿನಗಳಲ್ಲಿ ನೆರವು ನೀಡಿದವರು, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷರಾಗಿ 36 ವರ್ಷಗಳ ಸಾರ್ಥಕ ಸೇವೆ ಸಲ್ಲಿಸಿದ ಹಿರಿಯ ಜೀವಿ ಕೆ.ಎಂ. ನಂಜಪ್ಪನವರು. ಅಂದು ಅವರು ನೀಡಿದ 20 ಸಾವಿರ ರೂ. ದೇಣಿಗೆ ಕಟ್ಟಡ ಮೇಲೇಳಲು ಸಹಾಯವಾಯಿತು.

ಶೇಷಾದ್ರಿಪುರಂ ಪ್ರೌಢಶಾಲೆಯ ಭಾರತ ಸೇವಾದಳ ಘಟಕ ನಾಡಿಗೆ ಅನೇಕ ನಾಯಕರನ್ನು ಸಮಾಜ ಸೇವಾ ಮುಖಂಡರನ್ನು ಕೊಡುಗೆಯಾಗಿ ನೀಡಿದೆ. ಧರ್ಮಸ್ಥಳದ ಧರ್ಮಾಧಿಕಾರಿ ಡಾ. ವೀರೇಂದ್ರ ಹೆಗ್ಗಡೆ, ಈಗ ಸಮ್ಮಿಶ್ರ ಸರ್ಕಾರದಲ್ಲಿ, ಸಚಿವರಾಗಿರುವ ಬಿಜೆಪಿ ನಾಯಕ ರಾಮಚಂದ್ರಗೌಡ, ರಾಜ್ಯಸಭಾ ಸದಸ್ಯ ಕಾಂಗ್ರೆಸ್ ಮುಖಂಡ ಬಿ.ಕೆ. ಹರಿಪ್ರಸಾದ್ ಸೇರಿದಂತೆ ಅನೇಕರು ಇಲ್ಲಿಂದಲೇ ಕಲಿತು ನಾಯಕತ್ವದ ಗುಣಗಳನ್ನು ಮೈಗೂಡಿಸಿಕೊಂಡವರು.

1983ರಲ್ಲಿ ಸೇವಾದಳದ ಕಾರ್ಯ ಚಟುವಟಿಕೆಗಳು ವಿಸ್ತಾರಗೊಂಡವು. ಇದಕ್ಕೆ ಪ್ರೇರಣೆ ನೀಡಿದವರು ಐ.ಎಸ್.ಎ. ರಾಮರಾಯರು. ಆ ಸಂದರ್ಭದಲ್ಲೇ ಸಂಸ್ಥೆ 25 ವರ್ಷಗಳ ಬೆಳ್ಳಿಹಬ್ಬ ಆಚರಿಸಿತು. ಅಂದು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಸಚಿವ ಡಿ.ಮಂಜುನಾಥ್ ಸೇವಾದಳ ಚಟುವಟಿಕೆಗಳನ್ನು ಮುಕ್ತ ಕಂಠದಿಂದ ಶ್ಲಾಘಿಸಿದರು. ಸರ್ಕಾರಿ ಶಾಲಾ ಶಿಕ್ಷಕರುಗಳಿಗೆ ಸೇವಾದಳದ ತರಬೇತಿ ನೀಡುವಲ್ಲಿ ಈ ಶಾಖೆ ಪ್ರಮುಖ ಪಾತ್ರ ವಹಿಸಿದೆ. ಶಾಖಾ ನಾಯಕ ಆರ್.ರಂಗಣ್ಣ ಹಾಗೂ ನಾರಾಯಣಮೂರ್ತಿಗಳ ಪ್ರಯತ್ನದಿಂದ ಸರ್ವೋದಯ ಶಾಖೆ ಶಿಕ್ಷಣ ಇಲಾಖೆ ಮನ್ನಣೆ, ಪ್ರಶಂಸೆಗೆ ಪಾತ್ರವಾಗಿದೆ.

'ಸೇವೆಗಾಗಿ ಬಾಳು' ಇದು ಸೇವಾದಳದ ಧ್ಯೇಯವಾಕ್ಯ. ಶಾಲಾ ದಿನಗಳ ನಂತರವೂ ಅನೇಕ ಸೇವಾ ಚಟುವಟಿಕೆಗಳನ್ನು ಇದು ನಡೆಸಿದೆ. ಶಾಲೆಯ ಕೀರ್ತಿಯನ್ನು ಹಿಮಾಲಯದವರೆಗೂ ಕೊಂಡೊಯ್ದು ಅಲ್ಲಿ ನಡೆದ ರಾಷ್ಟ್ರಮಟ್ಟದ ಶಿಬಿರದಲ್ಲಿ ಪಾಲ್ಗೊಂಡು ಶ್ರಮದಾನ ಮಾಡಿದ ಕೀರ್ತಿ ಈ ಶಾಲೆಯ ಸೇವಾದಳ ಕಾರ್ಯಕರ್ತರದ್ದು.

ಗ್ರಾಮೀಣ ಪರಿಸರ, ಸ್ವಚ್ಛತೆ, ಹಳ್ಳಿ ಮಕ್ಕಳಿಗೆ ಶಿಕ್ಷಣ, ಗಿಡಗಳನ್ನು ನೆಡುವುದು ಇವೇ ಮೊದಲಾದ ಸಮಾಜೋಪಯೋಗಿ ಕೆಲಸಗಳನ್ನು ಹಮ್ಮಿಕೊಂಡು ಸೇವಾದಳ ದುಡಿಯುತ್ತಿದೆ.

ಸಿದ್ಧರಬೆಟ್ಟ ಸಮೀಪದ ಶ್ರೀ ಶಾರದಾ ಮಠದ ಪರಿಸರದಲ್ಲಿ 250 ಗಿಡಗಳನ್ನು ನೆಟ್ಟಿದ್ದು ದೊಡ್ಡ ದಾಖಲೆ. ಚಿಕ್ಕಬುಬ್ಬಿಯಲ್ಲಿನ ತಪೋವನಕ್ಕೆ ಭೇಟಿ ನೀಡಿ ಗ್ರಾಮೀಣ ಬದುಕಿನ ಪರಿಚಯ ಮಾಡಿಕೊಂಡಿದೆ.

ದೇಶಪ್ರೇಮ ಭಾವೈಕ್ಯತೆ, ನೈತಿಕ ಮೌಲ್ಯ, ಕಾರ್ಯ ನೈಪುಣ್ಯತೆಗಳನ್ನು ಮೈಗೂಡಿಸಿಕೊಂಡಿರುವ ಈ ಘಟಕಕ್ಕೆ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಗೌರವ ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಕೋಶಾಧ್ಯಕ್ಷ ಟಿ.ಎಸ್. ಹಂಜಾರಪ್ಪ ಸೇರಿದಂತೆ ಅನೇಕರು ಬೆಂಬಲವಾಗಿ ನಿಂತಿದ್ದಾರೆ.

ಸಂಪದ್ಭರಿತ ರಾಷ್ಟ್ರ ನಿರ್ಮಾಣ ಸೇವಾದಳ ಶಾಖೆಯ ಮುಖ್ಯ ಗುರಿಗಳಲ್ಲೊಂದು.

-ಎಚ್.ಎಸ್. ಶಿವಕುಮಾರ ಆರಾಧ್ಯ

ಸಂಯುಕ್ತ ಕರ್ನಾಟಕ.

24-2-2007

# ಭಾರತ ಸೇವಾದಳಕ್ಕೆ ಆಯ್ಕೆ



*ಭಾರತ ಸೇವಾದಲ ಕೇಂದ್ರ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿ ಹೆಚ್.ಎಂ.ಗುರುಸಿದ್ದ ಸ್ವಾಮಿ, ಪ್ರಧಾನ ಕಾರ್ಯದರ್ಶಿಯಾಗಿ ಯು.ಆರ್.ಸಭಾಪತಿ, ಕೋಶಾಧ್ಯಕ್ಷರಾಗಿ ಪೂಡೇ ಪಿ.ಕೃಷ್ಣ ಮತ್ತು ಸಂಘಟನಾ ಕಾರ್ಯದರ್ಶಿಯಾಗಿ ಹೆಚ್.ಹೆಚ್.ದೇವರಾಜ್ ಮರು ಆಯ್ಕೆಯಾಗಿದ್ದಾರೆ.*

ಬೆಂಗಳೂರು, ಫೆ. ೨೩– ಭಾರತ ಸೇವಾದಲದ ಕೇಂದ್ರ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿ ಬಳ್ಳಾರಿಯ ನ್ಯಾಯವಾದಿ ಹೆಚ್.ಎಂ.ಗುರುಸಿದ್ದ ಸ್ವಾಮಿ ಮತ್ತು ಪ್ರಧಾನ ಕಾರ್ಯದರ್ಶಿಯಾಗಿ ಉಡುಪಿಯ ಮಾಜಿ ಶಾಸಕ ಯು.ಆರ್.ಸಭಾಪತಿ ಮುಂದಿನ ಮೂರು ವರ್ಷಗಳ ಅವಧಿಗೆ ಮರು ಆಯ್ಕೆಯಾಗಿದ್ದಾರೆ. ಭಾರತ ಸೇವಾದಲ ಕೇಂದ್ರ ಕಚೇರಿಯಲ್ಲಿ ಫೆ೨೧ ರಂದು ಅಧ್ಯಕ್ಷರು ಮತ್ತು ಪದಾಧಿಕಾರಿಗಳ ಚುನಾವಣೆ ನಡೆಯಿತು.ಕೋಶಾಧ್ಯಕ್ಷರಾಗಿ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸದಸ್ಯ ಪೂಡೇ ಪಿ.ಕೃಷ್ಣ, ಸಂಘಟನಾ ಕಾರ್ಯದರ್ಶಿಯಾಗಿ ಹೆಚ್.ಹೆಚ್. ದೇವರಾಜ್ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ.

ಸೇವಾದಲದ ಹಿರಿಯ ಕಾರ್ಯಕರ್ತರಾದ ಹೆಚ್.ಹೆಚ್.ಬಳ್ಳಾರಿ, ಬೀದರ್ ಜಿಲ್ಲಾ ಸಾಹಿತ್ಯ ಪರಿಷತ್ ಅಧ್ಯಕ್ಷ ಶಿವಶರಣಪ್ಪ ವಾಲಿ, ಎಂ.ವಿ.ದೇವಿಪ್ರಸಾದ್, ಬಿ.ಸಿ.ವೆಂಕಟೇಶ್ ಉಪಾಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ.

ಮಹಿಳಾ ಸಂಘಟನಾ ಕಾರ್ಯದರ್ಶಿಯಾಗಿ ಉಮಾ ಐ.ಬಿ.ಶಂಕರ್, ಅಖಿಲ ಭಾರತ ಸಂಚಾಲಕರಾಗಿ ಸುಭಾಷ್‌ರೆಡ್ಡಿ ಪಾಟೀಲ್, ಸದಸ್ಯರಾಗಿ ರಾಜ್ಯಸಭಾ ಸದಸ್ಯ ಹಾಗೂ ಎ.ಐ.ಸಿ.ಸಿ ಪ್ರಧಾನ ಕಾರ್ಯದರ್ಶಿ ಬಿ.ಕೆ.ಹರಿಪ್ರಸಾದ್ ಆಯ್ಕೆಯಾಗಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

# ಭಾರತ ಸೇವಾದಲ ಪದಾಧಿಕಾರಿಗಳ ಆಯ್ಕೆ



ಎಚ್.ಎಂ. ಗುರುಸಿದ್ದಸ್ವಾಮಿ, ಯು.ಆರ್. ಸಭಾಪತಿ, ವೂಡೇ ಪಿ. ಕೃಷ್ಣ, ಎಚ್.ಎಚ್. ದೇವರಾಜ್

ಬೆಂಗಳೂರು, ಫೆ. 23: ಭಾರತ ಸೇವಾದಲ ಅಧ್ಯಕ್ಷರಾಗಿ ಬಳ್ಳಾರಿಯ ನ್ಯಾಯವಾದಿ ಎಚ್.ಎಂ. ಗುರುಸಿದ್ದಸ್ವಾಮಿ ಹಾಗೂ ಪ್ರಧಾನ ಕಾರ್ಯದರ್ಶಿಯಾಗಿ ಉಡುಪಿಯ ಮಾಜಿ ಶಾಸಕ ಯು.ಆರ್. ಸಭಾಪತಿ ಆಯ್ಕೆಯಾಗಿದ್ದಾರೆ.

ಫೆಬ್ರವರಿ 21ರಂದು ಬೆಂಗಳೂರಿನ ಭಾರತ ಸೇವಾದಲ ಕೇಂದ್ರ ಕಚೇರಿಯಲ್ಲಿ ನಡೆದ ಚುನಾವಣೆಯಲ್ಲಿ ಮುಂದಿನ ಮೂರು ವರ್ಷಗಳ ಕಾಲಾವಧಿಗೆ ಮರು ಆಯ್ಕೆಗೊಂಡಿದ್ದಾರೆ.

ಇದೇ ಸಂದರ್ಭದಲ್ಲಿ ಕೋಶಾಧ್ಯಕ್ಷರಾಗಿ ಶೇಷಾದ್ರಿಪುರಂ ಶೈಕ್ಷಣಿಕ ಸಮೂಹ ಸಂಸ್ಥೆಗಳ ಕಾರ್ಯದರ್ಶಿ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸದಸ್ಯ ವೂಡೇ ಪಿ. ಕೃಷ್ಣ, ಸಂಘಟನಾ ಕಾರ್ಯದರ್ಶಿಯಾಗಿ ಹಾಸನದ ಎಚ್.ಎಚ್. ದೇವರಾಜ್ ಆಯ್ಕೆಯಾಗಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್‌ನ ಮಾಜಿ ಅಧ್ಯಕ್ಷ ಹರಿಕೃಷ್ಣಪುನರೂರು ಅಧ್ಯಕ್ಷತೆಯಲ್ಲಿ ನಡೆದ ಕೇಂದ್ರ ಕಾರ್ಯಕಾರಿ ಸಮಿತಿಯ ಇತರ ಪದಾಧಿಕಾರಿಗಳ ಚುನಾವಣೆಯಲ್ಲಿ ಹಿರಿಯ ಕಾರ್ಯಕರ್ತ ಎಚ್.ಎಚ್. ಬಳ್ಳಾರಿ, ಬೀದರ್ ಜಿಲ್ಲಾ ಸಾಹಿತ್ಯ ಪರಿಷತ್ ಅಧ್ಯಕ್ಷ ಶಿವಶರಣಪ್ಪ ವಾಲಿ, ಮೈಸೂರಿನ ಎಂ.ವಿ. ದೇವಿಪ್ರಸಾದ್, ಬೆಂಗಳೂರಿನ ಬಿ.ಸಿ. ವೆಂಕಟೇಶ್ ಉಪಾಧ್ಯಕ್ಷರುಗಳಾಗಿ ಸರ್ವಾನುಮತದಿಂದ ಆಯ್ಕೆಯಾಗಿರುತ್ತಾರೆ.

ಮಹಿಳಾ ಸಂಘಟನೆ ಕಾರ್ಯದರ್ಶಿಯಾಗಿ ಚಿಕ್ಕಮಗಳೂರಿನ ಉಮಾ ಐ.ಬಿ. ಶಂಕರ್, ಅಖಿಲ ಭಾರತ ಸಂಚಾಲಕರಾಗಿ ರಾಯಚೂರಿನ ಸುಭಾಷ್‌ರೆಡ್ಡಿ ಪಾಟೀಲ್ ಆಯ್ಕೆಯಾಗಿದ್ದಾರೆ. ಸಂಸ್ಥೆಯ ಕೇಂದ್ರ ಕಾರ್ಯಕಾರಿ ಸಮಿತಿ ಸದಸ್ಯರಾಗಿ ರಾಜ್ಯಸಭೆ ಸದಸ್ಯ ಹಾಗೂ ಎಐಸಿಸಿ ಪ್ರಧಾನ ಕಾರ್ಯದರ್ಶಿ ಬಿ.ಕೆ. ಹರಿಪ್ರಸಾದ್ ಆಯ್ಕೆಯಾಗಿದ್ದಾರೆ.

ಭಾರತ ಸೇವಾದಲದ ಕೇಂದ್ರ ಸಮಿತಿ ಸದಸ್ಯ ರಾಜ್ಯ ಸಹಕಾರ ಸಚಿವ ಜಿ.ಟಿ. ದೇವೇಗೌಡ ಸೇರಿದಂತೆ ಹಲವಾರು ಗಣ್ಯರು ಉಪಸ್ಥಿತರಿದ್ದರು.

ವಿಜಯ ಕರ್ನಾಟಕ, ಬೆಂಗಳೂರು
ಶುಕ್ರವಾರ 23 ಫೆಬ್ರವರಿ 2007

# ಸೇವಾದಲಕ್ಕೆ ಆಯ್ಕೆ

ಭಾರತ ಸೇವಾದಲದ ಕೇಂದ್ರ ಕಾರ್ಯಕಾರಿ ಸಮಿತಿ ನೂತನ ಅಧ್ಯಕ್ಷರಾಗಿ ಬಳ್ಳಾರಿಯ ನ್ಯಾಯವಾದಿ ಎಚ್.ಎಂ. ಗುರುಸಿದ್ಧಸ್ವಾಮಿ ಆಯ್ಕೆಯಾಗಿದ್ದಾರೆ.

ಪ್ರಧಾನ ಕಾರ್ಯದರ್ಶಿಯಾಗಿ ಮಾಜಿ ಶಾಸಕ ಯು.ಆರ್. ಸಭಾಪತಿ, ಕೋಶಾಧ್ಯಕ್ಷರಾಗಿ ವೂಡೇ ಪಿ. ಕೃಷ್ಣ, ಸಂಘಟನಾ ಕಾರ್ಯದರ್ಶಿಯಾಗಿ ಎಚ್.ಎಚ್. ದೇವರಾಜ್, ಮಹಿಳಾ ಸಂಘಟನಾ ಕಾರ್ಯದರ್ಶಿ ಸ್ಥಾನಕ್ಕೆ ಉಮಾ ಐ.ಬಿ. ಶಂಕರ್, ಅಖಿಲ ಭಾರತ ಸಂಚಾಲಕರಾಗಿ ಸುಭಾಷ್‌ರೆಡ್ಡಿ ಪಾಟೀಲ್ ಆಯ್ಕೆಯಾಗಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

ಪ್ರಜಾವಾಣಿ
ಶುಕ್ರವಾರ 23ನೇ ಫೆಬ್ರುವರಿ 2007

# ಸೇವಾದಲ ಅಧ್ಯಕ್ಷರಾಗಿ ಗುರುಸಿದ್ದಸ್ವಾಮಿ ಆಯ್ಕೆ

ಪ್ರಜಾವಾಣಿ ವಾರ್ತೆ





ಬೆಂಗಳೂರು: ಭಾರತ ಸೇವಾದಲದ ಕೇಂದ್ರ ಕಾರ್ಯಕಾರಿ ಸಮಿತಿಯ ನೂತನ ಅಧ್ಯಕ್ಷರಾಗಿ ಬಳ್ಳಾರಿಯ ನ್ಯಾಯವಾದಿ ಎಚ್.ಎಂ. ಗುರುಸಿದ್ದಸ್ವಾಮಿ ಆಯ್ಕೆಯಾಗಿದ್ದಾರೆ.

ಬುಧವಾರ ನಗರದ ಕುಮಾರಕೃಪಾ **ಗುರುಸಿದ್ದಸ್ವಾಮಿ, ಯು.ಆರ್.ಸಭಾಪತಿ** ಅತಿಥಿಗೃಹದಲ್ಲಿ ನಡೆದ ಸೇವಾದಲದ ಕೇಂದ್ರ ಕಾರ್ಯಕಾರಿ ಸಮಿತಿಯಲ್ಲಿ ಸಭೆಯಲ್ಲಿ ಅವರನ್ನು ಈ ಹುದ್ದೆಗೆ ಆಯ್ಕೆ ಮಾಡಲಾಗಿದೆ. ಇದೇ ಸಂದರ್ಭದಲ್ಲಿ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿ ಮಾಜಿ ಶಾಸಕ ಯು.ಆರ್.ಸಭಾಪತಿ, ಕೋಶಾಧ್ಯಕ್ಷರಾಗಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಮತ್ತು ಸಂಘಟನಾ ಕಾರ್ಯದರ್ಶಿಯಾಗಿ ಹಾಸನದ ಎಚ್.ಎಚ್. ದೇವರಾಜ್ ಆಯ್ಕೆಯಾಗಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್‌ನ ಮಾಜಿ ಅಧ್ಯಕ್ಷ ಹರಿಕೃಷ್ಣ ಪುನರೂರು ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ, ಮಹಿಳಾ ಸಂಘಟನಾ ಕಾರ್ಯದರ್ಶಿಯಾಗಿ ಚಿಕ್ಕಮಗಳೂರಿನ ಉಮಾ ಐ.ಬಿ. ಶಂಕರ್, ಅಖಿಲ ಭಾರತ ಸಂಚಾಲಕರಾಗಿ ರಾಯಚೂರಿನ ಸುಭಾಷ್ ರೆಡ್ಡಿ ಮತ್ತು ಕೇಂದ್ರ ಕಾರ್ಯಕಾರಿ ಸಮಿತಿಯ ಸದಸ್ಯರನ್ನಾಗಿ ಎಐಸಿಸಿ ಪ್ರಧಾನ ಕಾರ್ಯದರ್ಶಿ ಬಿ.ಕೆ. ಹರಿಪ್ರಸಾದ್ ಅವರನ್ನು ಆಯ್ಕೆ ಮಾಡಲಾಗಿದೆ.

ಉಪಾಧ್ಯಕ್ಷರು: ಎಚ್.ಎಚ್. ಬಳ್ಳಾರಿ, ಬೀದರ್ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಶಿವಶರಣಪ್ಪ ವಾಲಿ, ಮೈಸೂರಿನ ಎಂ.ವಿ ದೇವಿಪ್ರಸಾದ್, ಬೆಂಗಳೂರಿನ ಬಿ.ಸಿ. ವೆಂಕಟೇಶ್. ಭಾರತ ಸೇವಾದಲದ ಕೇಂದ್ರ ಸಮಿತಿ ಸದಸ್ಯರೂ ಆಗಿರುವ ಸಹಕಾರ ಸಚಿವ ಜಿ.ಟಿ. ದೇವೇಗೌಡ ಉಪಸ್ಥಿತರಿದ್ದರು.

ರಾಜ್ಯ | ಪ್ರಜಾವಾಣಿ

ಭಾನುವಾರ 18ನೇ ಫೆಬ್ರುವರಿ 2007

# ಐಎನ್‌ಎ ರಾಮರಾವ್ ಪುಣ್ಯ ಸ್ಮರಣೆ

ಪ್ರಜಾವಾಣಿ ವಾರ್ತೆ

ಬೆಂಗಳೂರು: ನಗರದ ಭಾರತ ಸೇವಾದಲ ಕೇಂದ್ರ ಕಚೇರಿಯಲ್ಲಿ ದಿ. ರಾಮರಾವ್ ಐ.ಎನ್.ಎ ಅವರ ಎರಡನೇ ವರ್ಷದ ಪುಣ್ಯಸ್ಮರಣೆ ಕಾರ್ಯಕ್ರಮ ಶನಿವಾರ ನಡೆಯಿತು.

ಈ ಸಂದರ್ಭದಲ್ಲಿ ಸೇವಾದಲ ಕೇಂದ್ರ ಸಮಿತಿಯ ಕೋಶಾಧ್ಯಕ್ಷ ಡಬ್ಲ್ಯೂ.ಟಿ.ಕೃಷ್ಣ ಅವರು ಮಾತನಾಡಿ, 'ದಿ.ರಾಮರಾವ್ ಅವರಲ್ಲಿದ್ದ ದಕ್ಷತೆ, ಸಂಘಟನಾ ಚತುರತೆ ಹಾಗೂ ಶಿಸ್ತು ನಾವು ಜೀವನದಲ್ಲಿ ಅಳವಡಿಸಿಕೊಳ್ಳುವ ಅಗತ್ಯವಿದೆ' ಎಂದು ಹೇಳಿದರು.

ಶೇಷಾದ್ರಿಪುರ ಬಾಲಕರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಎಚ್.ಎಂ.ಶಿವ ಕುಮಾರ್, ಶಾಖಾ ನಾಯಕ ಆರ್.ರಂಗಣ್ಣ, ಪ್ರಭಾರ ದಳಪತಿ ಡಿ.ಎಫ್.ಹಳ್ಳಪ್ಪನವರ್, ಯೋಜನಾಧಿಕಾರಿ ಎಸ್.ಲಿಂಗಪ್ಪ, ಭಾರತ್ ನಿರ್ಮಾಣ್ ಪ್ರತಿಷ್ಠಾನದ ಕಾರ್ಯದರ್ಶಿ ಎಸ್.ವಿ.ಮಂಜುನಾಥ್ ಮುಂತಾದವರು ಮಾತನಾಡಿದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

18-2-2007

# ಐಎನ್‌ಎ ರಾಮರಾವ್ ಪುಣ್ಯಸ್ಮರಣೆ

ಬೆಂಗಳೂರು, ಫೆ. 17- ಇಲ್ಲಿಯ ಭಾರತ ಸೇವಾದಲ ಕೇಂದ್ರ ಕಚೇರಿಯಲ್ಲಿ ದಿವಂಗತ ರಾಮರಾವ್ ಐಎನ್‌ಎ ಅವರ ದ್ವಿತೀಯ ವರ್ಷದ ಪುಣ್ಯಸ್ಮರಣೆ ಕಾರ್ಯಕ್ರಮ ಶನಿವಾರ ನಡೆಯಿತು.

ಸೇವಾದಲ ಕೇಂದ್ರ ಸಮಿತಿ ಕೋಶಾಧ್ಯಕ್ಷ ಡಬ್ಲ್ಯು.ಪಿ. ಕೃಷ್ಣ ಅವರು ಮಾತನಾಡಿ, ರಾಮರಾವ್ ಅವರು ಹೊಂದಿದ್ದ ದಕ್ಷತೆ, ಸಂಘಟನಾ ಚತುರತೆ, ಶಿಸ್ತು ಹಾಗೂ ಸರಳ ಜೀವನದ ಬಗ್ಗೆ ತಿಳಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಬಾಲಕರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಎಚ್.ಎಂ. ಶಿವಕುಮಾರ ಆರಾಧ್ಯ, ಶಾಖಾ ನಾಯಕ ಆರ್. ರಂಗಣ್ಣ, ಪ್ರಭಾರ ದಲಪತಿ ಡಿ.ಎಫ್. ಹಳ್ಳಪ್ಪನವರ್, ಯೋಜನಾಧಿಕಾರಿ ಎಸ್. ಲಿಂಗಪ್ಪ, ಮಹಿಳಾ ಮುಖ್ಯ ಸಂಘಟಕಿ ಎಂ.ಎನ್. ಪುಷ್ಪಾವತಿ, ಪ್ರಭಾರ ಸಹಾಯಕ ಕಾರ್ಯದರ್ಶಿ ಚಿಕ್ಕದುರ್ಗಯ್ಯ, ಜಿಲ್ಲಾ ಸಂಘಟಕರಾದ ಬೋರಯ್ಯ, ಅಬ್ದುಲ್ ಖುದ್ದೂಸ್ ಮುಂತಾದವರು ಉಪಸ್ಥಿತರಿದ್ದರು.

ಪ್ರಜಾವಾಣಿ

ಬುಧವಾರ 14ನೇ ಫೆಬ್ರುವರಿ 2007

# ‘ಕ್ರೀಡಾ ಮನೋಭಾವ ಕೊರತೆ’

**ಯಲಹಂಕ:** ಇತ್ತೀಚಿನ ದಿನಗಳಲ್ಲಿ ನಮ್ಮ ವಿದ್ಯಾರ್ಥಿಗಳಲ್ಲಿ ಕ್ರೀಡಾ ಮನೋಭಾವನೆ ಕುಂಠಿತವಾಗುತ್ತಿದೆ ಎಂದು ಮಾಜಿ ಶಾಸಕ ಯು.ಆರ್. ಸಭಾಪತಿ ಹೇಳಿದರು.

ಸಮೀಪದ ಕಣ್ಣೂರು ಗ್ರಾಮದಲ್ಲಿ ಇಲ್ಲಿನ ಶೇಷಾದ್ರಿಪುರಂ ಪ್ರಥಮದರ್ಜೆ ಕಾಲೇಜಿನ ವತಿಯಿಂದ ಹಮ್ಮಿಕೊಂಡಿರುವ ರಾಷ್ಟ್ರೀಯ ಸೇವಾಯೋಜನಾ ಶಿಬಿರದ ಉದ್ಘಾಟನೆ ನೆರವೇರಿಸಿ ಮಾತನಾಡಿದ ಅವರು ಟಿ.ವಿ.

ಧಾರಾವಾಹಿಗಳ ಕಥೆಗಳಲ್ಲಿ ಮೂಡಿಬರುವ ದ್ವೇಷ, ಅಸಹನೆ, ಕೌರ್ಯದ ಸನ್ನಿವೇಶಗಳ ವೈಭವೀಕರಣದಿಂದ ಯುವಜನಾಂಗ ಹಾದಿ ತಪ್ಪುತ್ತಿದೆ ಎಂದು ಆತಂಕ ವ್ಯಕ್ತಪಡಿಸಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೆ. ಪಿ. ಕೃಷ್ಣ ಮಾತನಾಡಿ ನಿಜವಾದ ಗ್ರಾಮಜೀವನ ಅರಿತರೆ ನಿಜವಾದ ಭಾರತವನ್ನು ಅರಿತಂತೆ ಎಂದು ಕಿವಿಮಾತು ಹೇಳಿದರು.

ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ಧರ್ಮದರ್ಶಿ ವೀರಭದ್ರಯ್ಯ ಗ್ರಾ.ಪಂ. ಅಧ್ಯಕ್ಷೆ ಸುನಂದಮ್ಮ ಉಪಾಧ್ಯಕ್ಷ ಎಲ್. ಕುಮಾರ್ ಎನ್.ಎಸ್.ಎಸ್. ಅಧಿಕಾರಿ ಎಚ್.ಬಿ. ಶಿವಕುಮಾರ್ ಮತ್ತಿತರರು ಉಪಸ್ಥಿತರಿದ್ದರು.




# ಕನ್ನಡಪ್ರಭ

**ಪುಟ 14, ಮಂಗಳವಾರ, 13 ಫೆಬ್ರವರಿ 2007**


■ ರಾಷ್ಟ್ರೀಯ ಸೇವಾ ಯೋಜನೆ ವಿಶೇಷ ವಾರ್ಷಿಕ ಶಿಬಿರ:ಉದ್ಘಾಟನೆ– ಯು.ಆರ್. ಸಭಾಪತಿ, ಅತಿಥಿಗಳು– ಎನ್.ಆರ್. ಪಂಡಿತಾರಾಧ್ಯ, ಡಾ।ಸಿ.ಜಿ. ಲಕ್ಷ್ಮೀಪತಿ, ಡಾ।ಎಂ. ಪ್ರಕಾಶ್, ಬಿ.ಎ. ಬಸವರಾಜು, ಅಧ್ಯಕ್ಷತೆ– ವೂಡೇ ಪಿ.ಕೃಷ್ಣ, ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜು, ಸ್ಥಳ– ಕಣ್ಣೂರು, ಬೆಂಗಳೂರು ಪೂರ್ವ ತಾಲ್ಲೂಕು, ಮಧ್ಯಾಹ್ನ 3.

ರಾಜ್ಯಪ್ರಗತಿ

10-3-2007

# ಸಮಾರಂಭದ ಉದ್ಘಾಟನೆ



ಶ್ರೀ ಕೊಳದ ಮಠ ಮಹಾಸಂಸ್ಥಾನದ ಡಾ|| ಶ್ರೀ ಶ್ರೀ ಶ್ರೀ ಶಾಂತವೀರ ಮಹಾಸ್ವಾಮಿಗಳವರ ಸಾನಿಧ್ಯದಲ್ಲಿ ಕರ್ನಾಟಕ ಸರ್ಕಾರದ ಕೃಷಿ ಇಲಾಖೆಯ ನಿ.ಕಾರ್ಯದರ್ಶಿ ಡಾ|| ಕೆ.ವಿ.ಪುರಾಣಿಕ ಮಠ ಅವರು ಉದ್ಘಾಟಿಸುತ್ತಿದ್ದಾರೆ. ಯೋಗಾಚಾರ್ಯ ಎಚ್.ಬಿ.ಶಿವಬಸವಯ್ಯ, ರೊ.ಎಸ್.ಕೃಷ್ಣಮೂರ್ತಿ, ಶೇಷಾದ್ರಿಪುರ ಶಿಕ್ಷಣದತ್ತಿಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ, ಬಿ.ಕೆ.ಮರಿಯಪ್ಪ ಧರ್ಮ ಸಂಸ್ಥೆಯ ವ್ಯ.ಧರ್ಮದರ್ಶಿ ಎನ್.ಪುಟ್ಟರುದ್ರ, ಜವಳಿಲ್ಯಾಬೊರೇಟರೀಸ್ ವ್ಯ.ನಿರ್ದೇಶಕ ಜೆ.ಎಸ್.ಡಿ.ಪಾಣಿ, ಬಿ.ಎ.ಎಸ್.ವಿ.(ನ) ಸಮಿತಿ ಅಧ್ಯಕ್ಷ ಕೆ.ರುದ್ರಪ್ಪ ಮತ್ತು ಸ್ವಾಭಿಮಾನಿ ಕರ್ನಾಟಕ ವೇದಿಕೆಯ ಕೋಶಾಧಿಕಾರಿ ನಾ.ಮಲ್ಲಿಕಾರ್ಜುನ ಉಪಸ್ಥಿತರಿದ್ದಾರೆ.

ಸಂಜೆವಾಣಿ
ಶನಿವಾರ 5 ಮೇ 2007

# ಅವಿರೋಧ ಆಯ್ಕೆ





ಬೆಂಗಳೂರು, ಮೇ ೫- ಭಾರತೀಯ ರೆಡ್‌ಕ್ರಾಸ್ ಬೆಂಗಳೂರು ಸಂಸ್ಥೆ ಉಪಾಧ್ಯಕ್ಷರಾಗಿ ವೂಡೆ ಪಿ. ಕೃಷ್ಣ, ಗೌರವ ಅಧ್ಯಕ್ಷರಾಗಿ ರಾಜು ಚಂದ್ರಶೇಖರ್ ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಸಂಸ್ಥೆಯ ಸಭಾಧ್ಯಕ್ಷ ಆರ್. ಅಶೋಕ್ ಅಧ್ಯಕ್ಷತೆಯಲ್ಲಿ ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಮುಂದಿನ ಮೂರು ವರ್ಷಗಳಿಗೆ ಆಯ್ಕೆಯಾಗಿದ್ದಾರೆ.

ಸಂಜೆವಾಣಿ ಶುಕ್ರವಾರ 4 ಮೇ 2007

# ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ

ನೂತನ ರಾಜ್ಯ ಉಪಾಧ್ಯಕ್ಷರಾಗಿ ಆಯ್ಕೆಯಾಗಿರುವ

## ಶ್ರೀ ವೂಡೇ ಪಿ. ಕೃಷ್ಣ

ಗೌರವ ಕಾರ್ಯದರ್ಶಿಗಳು, ಶೇಷಾದ್ರಿಪುರಂ ಸಮೂಹ ವಿದ್ಯಾಸಂಸ್ಥೆಗಳು, ಬೆಂಗಳೂರು

ಇವರಿಗೆ

## ಹಾರ್ದಿಕ ಅಭಿನಂದನೆಗಳು



ಶ್ರೀ ವೂಡೇ ಪಿ. ಕೃಷ್ಣ

ಸ್ವಾತಂತ್ರ್ಯ ಹೋರಾಟಗಾರರ ಮನೆತನದಿಂದ 1963ರಲ್ಲಿ ಜನಿಸಿದ ಶ್ರೀ ವೂಡೆ ಪಿ. ಕೃಷ್ಣರವರು ಮೈಸೂರಿನ ರಾಮಕೃಷ್ಣ ವಿದ್ಯಾಶಾಲೆಯ ಶಿಕ್ಷಣ, ಬಿ.ಇ. ಎಂ.ಎಸ್ (ಇಂಜಿನಿಯರಿಂಗ್) ಎಲ್.ಎಲ್.ಬಿ. ಪದವೀಧರರಾಗಿದ್ದು ವೃತ್ತಿಯಲ್ಲಿ ಚಾರ್ಟರ್ಡ್ ಇಂಜಿನಿಯರ್ ಆಗಿ ಕೈಗಾರಿಕಾ ಸ್ವತ್ತುಗಳ ಮೌಲ್ಯಮಾಪನದಲ್ಲಿ ವಿಶೇಷ ಪರಿಣತಿಯೊಂದಿಗೆ

* ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಕಾರ್ಯಕಾರಿಣಿ ಸಮಿತಿ ಸದಸ್ಯರಾಗಿ
* ಭಾರತ ಸೇವಾದಳದ ಕೋಶಾಧ್ಯಕ್ಷರಾಗಿ, * ಗಾಂಧಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ
* ಯುತ್ ಹಾಸ್ಟೆಲ್ ಅಸೋಸಿಯೇಶನ್ ಆಫ್ ಇಂಡಿಯಾ ಬೆಂಗಳೂರು ದಕ್ಷಿಣ ಘಟಕದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿ
* 2000ನೇ ಇಸವಿಯಲ್ಲಿ ಭಾರತ ಶ್ರೀಲಂಕಾ ಯುವ ವಿನಿಮಯ ಕಾರ್ಯಕ್ರಮದಲ್ಲಿ ಭಾರತ ನಿಯೋಗದ ಮುಖಂಡತ್ವ
* 2006ರಲ್ಲಿ ಚೀನಾ ಸರಕಾರದ ಆಹ್ವಾನದಂತೆ ಭಾರತೀಯ ನಿಯೋಗದ ಸದಸ್ಯರಾಗಿ
* 2002ರಲ್ಲಿ ಶಿಕ್ಷಣ ಕ್ಷೇತ್ರದ ಸಾಧನೆಗೆ ಬೆಂಗಳೂರು ಮಹಾನಗರಪಾಲಿಕೆಯ ಕೆಂಪೇಗೌಡ ಪ್ರಶಸ್ತಿ ಪುರಸ್ಕಾರ
* 2004ರಲ್ಲಿ ಪ್ರತಿಷ್ಠಿತ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳನ್ನು ಪಡೆದ

ಶ್ರೀ ವೂಡೇ ಪಿ. ಕೃಷ್ಣರವರಿಗೆ ಹಾರ್ದಿಕ ಶುಭಾಶಯಗಳು



ಎಚ್.ಎಂ. ಗುರುಸಿದ್ದಸ್ವಾಮಿ
ನ್ಯಾಯವಾದಿಗಳು
ಅಧ್ಯಕ್ಷರು



ಯು.ಆರ್. ಸಭಾಪತಿ
ಮಾಜಿ ಶಾಸಕರು, ಪ್ರಧಾನ ಕಾರ್ಯದರ್ಶಿಗಳು

## ಭಾರತ ಸೇವಾ ದಲ

ಕೇಂದ್ರ ಕಛೇರಿ, ಕುಮಾರಕೃಪಾ ರಸ್ತೆ, ಬೆಂಗಳೂರು.

ಈ ಸಂಜೆ

ಶುಕ್ರವಾರ, 04 ಮೇ 2007

# ರೆಡ್‌ಕ್ರಾಸ್ ಕೋಶಾಧ್ಯಕ್ಷರಾಗಿ ರಾಜುಚಂದ್ರಶೇಖರ್ ಆಯ್ಕೆ


ರಾಜುಚಂದ್ರಶೇಖರ್


ವೂಡೇ ಪಿ.ಕೃಷ್ಣ

ಬೆಂಗಳೂರು, ಮೇ 4- ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಹಾಗೂ ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಸಭಾಧ್ಯಕ್ಷ ಆರ್. ಅಶೋಕ್ ಅವರ ಅಧ್ಯಕ್ಷತೆಯಲ್ಲಿ ನಡೆದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಆಡಳಿತ ಮಂಡಳಿ ಸಭೆಯಲ್ಲಿ ವೂಡೇ ಪಿ. ಕೃಷ್ಣ ಅವರು ಉಪ- ಸಭಾ ಧ್ಯಕ್ಷರಾಗಿ ಹಾಗೂ ರಾಜು ಚಂದ್ರಶೇಖರ್ ಅವರು ಗೌರವ ಕೋಶಾಧ್ಯಕ್ಷರಾಗಿ ಮುಂದಿನ ಮೂರು ವರ್ಷಗಳ ಅವಧಿಗೆ ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಪರಿಚಯ: ರಾಜು ಚಂದ್ರಶೇಖರ್ ಅವರು 'ನಡೆದಾಡುವ ರಕ್ತನಿಧಿ' ಎಂದೇ ಎಲ್ಲರಿಗೂ ಚಿರಪರಿಚಿತ. ಮೂರು ದಶಕಗಳಿಗೂ ಹೆಚ್ಚಿನ ಕಾಲದ ಸಕ್ರಿಯ ಸಾಮಾಜಿಕ ಸೇವೆ ಸಲ್ಲಿಸಿರುವ ರಾಜು ಚಂದ್ರಶೇಖರ್ ಅವರು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಗೌರವ ಕೋಶಾಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಪ್ರತಿಷ್ಠಿತ ಸ್ವಯಂ ಸೇವಾ ಸಂಸ್ಥೆಗಳಾದ ಅಂತಾರಾಷ್ಟ್ರೀಯ ಲಯನ್ಸ್ ಸಂಸ್ಥೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಸ್ವಯಂ ಪ್ರೇರಿತ ರಕ್ತದಾನಿಗಳ ಒಕ್ಕೂಟ, ಮುಂತಾದವುಗಳಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಿದ್ದಾರೆ.

ಇವರ ಬಹುಮುಖಿ ಸಮಾಜ ಸೇವೆಯನ್ನು ಗುರುತಿಸಿ ಕರ್ನಾಟಕ ಸರ್ಕಾರ 1996ರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ರಕ್ತ ಸಂಘಟಕರಾಗಿ ಮಾಡಿದ ಸಾಧನೆಗಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ 1994ರ ಕೆಂಪೇಗೌಡ ಪ್ರಶಸ್ತಿ ನೀಡಿ ಪುರಸ್ಕರಿಸಿದೆ. ಅಲ್ಲದೆ ಲಯನ್ಸ್ ಸಂಸ್ಥೆಗೆ ಸಲ್ಲಿಸಿದ ವಿಶಿಷ್ಟ ಸೇವೆಗೆ ಅಂತಾರಾಷ್ಟ್ರೀಯ ನಾಯಕತ್ವ ಪುರಸ್ಕಾರಗಳು ಸಂದಿವೆ.

ವೂಡೇ ಪಿ. ಕೃಷ್ಣ ಅವರು ಶೇಷಾದ್ರಿಪುರಂ ಸಮೂಹ ವಿದ್ಯಾಸಂಸ್ಥೆಗಳ ಗೌರವ ಕಾರ್ಯದರ್ಶಿಯಾಗಿ ಎಲ್ಲರಿಗೂ ಚಿರಪರಿಚಿತ. ಪ್ರತಿಷ್ಠಿತ ಸ್ವಯಂ ಸೇವಾ ಸಂಸ್ಥೆಗಳಾದ ಭಾರತ ಸೇವಾದಳ, ಗಾಂಧಿ ಶಾಂತಿ ಪ್ರತಿಷ್ಠಾನ, ಯೂತ್ ಹಾಸ್ಟೆಲ್ಸ್ ಅಸೋಸಿಯೇಷನ್ ಆಫ್ ಇಂಡಿಯಾ ಇತರೆಡೆ ಹಲವು ವರ್ಷಗಳಿಂದ ಉನ್ನತ ಸ್ಥಾನಗಳನ್ನು ಅಲಂಕರಿಸಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಿದ್ದಾರೆ. ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸುತ್ತಿರುವ ವೂಡೇ ಪಿ.ಕೃಷ್ಣ ಅವರು ರಾಜ್ಯ ಶಾಖೆಯ ಉಪಾಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಇವರ ಬಹುಮುಖಿ ಸಮಾಜ ಸೇವೆಯನ್ನು ಗುರುತಿಸಿ ಕರ್ನಾಟಕ ಸರ್ಕಾರ 1986ರ ರಾಜ್ಯ ಯುವ ಪ್ರಶಸ್ತಿ ಹಾಗೂ 2004ರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ಶಿಕ್ಷಣ ಕ್ಷೇತ್ರದ ಸಾಧನೆಗಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ 2002ರ ಕೆಂಪೇಗೌಡ ಪ್ರಶಸ್ತಿ ನೀಡಿ ಪುರಸ್ಕರಿಸಿದೆ.

ವಿಜಯ ಕರ್ನಾಟಕ, ಬೆಂಗಳೂರು
ಗುರುವಾರ 1 ಫೆಬ್ರವರಿ 2007 

# 'ಶಿಕ್ಷಣದಿಂದ ಪ್ರಗತಿ'

ಬೆಂಗಳೂರು, ಜ.31 - ಶಿಕ್ಷಣದಿಂದ ಮಾತ್ರ ದೇಶದ ಪ್ರಗತಿ ಸಾಧ್ಯ ಎಂದು ಸಿದ್ಧಗಂಗಾ ಕ್ಷೇತ್ರದ ಶ್ರೀ ಶಿವಕುಮಾರ ಸ್ವಾಮೀಜಿ ಹೇಳಿದ್ದಾರೆ.

ಶಿಕ್ಷಣ ಸೇವೆ ನಿಜವಾದ ದೇವರ ಸೇವೆ. ಹಲವು ವರ್ಷಗಳಿಂದ ಅಂಥ ಸೇವೆ ಮಾಡುತ್ತಿರುವ ಶೇಷಾದ್ರಿಪುರ ಕಾಲೇಜು ಪ್ರಶಂಸಾರ್ಹ ಎಂದು ನಗರದಲ್ಲಿ ಏರ್ಪಡಿಸಿದ್ದ 'ಸ್ನೇಹ-ಸಮ್ಮಿಲನ' ಕಾರ್ಯಕ್ರಮದಲ್ಲಿ ಶ್ಲಾಘಿಸಿದರು.

ಬೆಂಗಳೂರು ವಿಶ್ವವಿದ್ಯಾಲಯ ಕುಲಪತಿ ಡಾ. ಎಚ್.ಎ. ರಂಗನಾಥ್, 'ಗುಣಮಟ್ಟದ ಶಿಕ್ಷಣ ನೀಡುವಲ್ಲಿ ಹೆಸರುಗಿರುವ ಶೇಷಾದ್ರಿಪುರ ಕಾಲೇಜು ಸ್ವಾಯತ್ತ ಸ್ಥಾನ ಪಡೆಯಲು ಅರ್ಹ' ಎಂದು ನುಡಿದರು.

2006ರ ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಮುಕುಂದ್ ತಿವಾರಿ, ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಉಪಾಧ್ಯಕ್ಷರಾದ ಎನ್.ಆರ್. ಪಂಡಿತಾರಾಧ್ಯ ಮತ್ತು ಡಬ್ಲ್ಯೂ.ಎಚ್. ಅನಿಲ್‌ಕುಮಾರ್ ಪಾಲ್ಗೊಂಡಿದ್ದರು.

# ಅಭಿನಂದನೆಗಳು

ತಾ|| **21.01.2007** ರಂದು ನಡೆದ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯ ಚುನಾವಣೆಯಲ್ಲಿ ಈ ಕೆಳಕಂಡ ಒಂಭತ್ತು ಮಂದಿ ಗಣ್ಯರು ಮುಂದಿನ ಮೂರು ವರ್ಷಗಳ ಕಾಲಾವಧಿಗೆ ಅವಿರೋಧವಾಗಿ ಆಯ್ಕೆಯಾಗಿರುತ್ತಾರೆ. ಇವರಿಗೆ ಹಾರ್ದಿಕ ಅಭಿನಂದನೆಗಳು.



ಶ್ರೀಮತಿ ಸರೋಜ
ಕೆ. ಎಂ. ನಂಜಪ್ಪ
ಸಮಾಜ ಸೇವಕಿ



ಶ್ರೀ. ಡಬ್ಲ್ಯೂ. ಪಿ. ಕೃಷ್ಣ
ಖ್ಯಾತ ಶಿಕ್ಷಣ ತಜ್ಞ ಹಾಗೂ
ರಾಜ್ಯೋತ್ಸವ ಪ್ರಶಸ್ತಿ ವಿಜೇತ



ಶ್ರೀ. ರಾಜು ಚಂದ್ರಶೇಖರ್
ಖ್ಯಾತ ರಕ್ತ ಸಂಘಟಕ ಹಾಗೂ
ರಾಜ್ಯೋತ್ಸವ ಪ್ರಶಸ್ತಿ ವಿಜೇತ



ಶ್ರೀ. ಎಂ.ಎಸ್.ಆರ್. ಆರಾಧ್ಯ
ಖ್ಯಾತ ಉದ್ಯಮಿ ಹಾಗೂ
ಸಮಾಜ ಸೇವಕರು



ಶ್ರೀ. ಎಂ. ನಾಗರಾಜ್
ಸಹಕಾರಿ ಬ್ಯಾಂಕ್
ಕಾರ್ಮಿಕ ಮುಖಂಡರು



ಶ್ರೀಮತಿ ಮಧುರ
ಅಶೋಕ್ ಕುಮಾರ್
ಸಮಾಜ ಸೇವಕಿ



ಶ್ರೀ. ಎ. ಆರ್. ಶ್ರೀನಿವಾಸಯ್ಯ
ಸಮಾಜ ಸೇವಕರು



ಶ್ರೀ. ಟಿ. ಪ್ರಭಾಕರ
ಸಮಾಜ ಸೇವಕರು



ಡಾ|| ಎಸ್. ಎಂ. ಸುರೇಶ್ವರಯ್ಯ
ಖ್ಯಾತ ವೈದ್ಯರು

ಪ್ರಕಟಣೆ: ದೇವತಾ ಬಿಲ್ಡರ್ಸ್, ಬೆಂಗಳೂರು.

ಸಂಜೆವಾಣಿ

ಮಂಗಳವಾರ 23 ಜನವರಿ 2007

# ಅಭಿನಂದನೆಗಳು



ಶ್ರೀಮತಿ ಸರೋಜ
ಕೆ. ಎಂ. ನರಿಜಪ್ಪ
ಸಮಾಜ ಸೇವಕಿ



[illegible]
ಖ್ಯಾತ ಶಿಕ್ಷಣ ತಜ್ಞ ಹಾಗೂ
ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ



ಶ್ರೀ. ರಾಜು ಚಂದ್ರಶೇಖರ್
ಖ್ಯಾತ ರಕ್ತ ಸಂಘಟಕ ಹಾಗೂ
ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ



ಶ್ರೀ. ಎಂ.ಎಸ್.ಆರ್. ಆರಾ[illegible]
ಖ್ಯಾತ ಉದ್ಯಮಿ ಹಾಗೂ
ಸಮಾಜ ಸೇವಕರು



ಶ್ರೀ. ಎಂ. ನಾಗರಾಜ್
ಸಹಕಾರಿ ಬ್ಯಾಂಕ್
ಕಾರ್ಮಿಕ ಮುಖಂಡರು



ಶ್ರೀಮತಿ ಮಧುರ
ಅಶೋಕ್ ಕುಮಾರ್
ಸಮಾಜ ಸೇವಕಿ



ಶ್ರೀ. ಬಿ.ಆರ್. ಶ್ರೀನಿವಾಸ[illegible]
ಸಮಾಜ ಸೇವಕರು



ಶ್ರೀ. ಪ್ರಭಾಕರ
ಸಮಾಜ ಸೇವಕರು



ಡಾ|| ಎಸ್.ಎನ್. ಸುರೇಶ್ವರಯ್ಯ
ಖ್ಯಾತ ವೈದ್ಯರು

**ದಿನಾಂಕ: 21.01.2007** ರಂದು ನಡೆದ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯ ಚುನಾವಣೆಯಲ್ಲಿ ಈ ಮೇಲ್ಕಂಡ ಒಂಭತ್ತು ಮಂದಿ ಗಣ್ಯರು ಮುಂದಿನ ಮೂರು ವರ್ಷಗಳ ಕಾಲಾವಧಿಗೆ ಅವಿರೋಧವಾಗಿ ಆಯ್ಕೆಯಾಗಿರುತ್ತಾರೆ. ಇವರಿಗೆ ಹಾರ್ದಿಕ ಅಭಿನಂದನೆಗಳನ್ನು ಕೋರುವ:

[illegible]

# ಅಭಿನಂದನೆಗಳು



ಶ್ರೀಮತಿ ಸರೋಜ
ಕೆ. ಎಂ. ಸಂಜಪ್ಪ,
ಸಮಾಜ ಸೇವಕಿ



ಶ್ರೀ. ಪ್ರೊ. ಪಿ. ಕೃಷ್ಣ
ಖ್ಯಾತ ಶಿಕ್ಷಣ ತಜ್ಞ ಹಾಗೂ
ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ



ಶ್ರೀ. ರಾಜು ಚಂದ್ರಶೇಖರ್
ಖ್ಯಾತ ರಕ್ತ ಸಂಘಟಕ ಹಾಗೂ
ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ



ಶ್ರೀ. ಎಂ.ಎಸ್.ಆರ್. ಆರಾಧ್ಯ
ಖ್ಯಾತ ಉದ್ಯಮಿ ಹಾಗೂ
ಸಮಾಜ ಸೇವಕರು



ಶ್ರೀ. ಎ. ನಾಗರಾಜ್
ಸಹಕಾರಿ ಬ್ಯಾಂಕ್
ಕಾರ್ಮಿಕ ಮುಖಂಡರು



ಶ್ರೀಮತಿ ಮಧುರ
ಅಶೋಕ್ ಕುಮಾರ್
ಸಮಾಜ ಸೇವಕಿ



ಶ್ರೀ. ಎ.ಆರ್. ಶ್ರೀನಿವಾಸಯ್ಯ
ಸಮಾಜ ಸೇವಕರು



ಶ್ರೀ. ಪ್ರಭಾಕರ
ಸಮಾಜ ಸೇವಕರು



ಡಾ|| ಎಸ್.ಎಂ. ಸುರೇಶ್ವರಯ್ಯ
ಖ್ಯಾತ ವೈದ್ಯರು

ದಿನಾಂಕ: **21.01.2007** ರಂದು ನಡೆದ ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಕರ್ನಾಟಕ ರಾಜ್ಯ ಶಾಖೆಯ ಚುನಾವಣೆಯಲ್ಲಿ ಈ ಮೇಲ್ಕಂಡ ಒಂಭತ್ತು ಮಂದಿ ಗಣ್ಯರು ಮುಂದಿನ ಮೂರು ವರ್ಷಗಳ ಕಾಲಾವಧಿಗೆ ಅವಿರೋಧವಾಗಿ ಆಯ್ಕೆಯಾಗಿರುತ್ತಾರೆ. ಇವರಿಗೆ ಹಾರ್ದಿಕ ಅಭಿನಂದನೆಗಳನ್ನು ಕೋರುವ:

**ಶಿಂಧೆ ಬ್ರದರ್ಸ್ ಹಾಗೂ ಕರ್ನಾಟಕ ಸ್ವಯಂ ರಕ್ತದಾನಿಗಳ ಒಕ್ಕೂಟ**

ಪುಟ 11 ಪ್ರಜಾವಾಣಿ, ಸೋಮವಾರ 22ನೇ ಜನವರಿ 2007



ಬೆಂಗಳೂರಿನಲ್ಲಿ ಇತ್ತೀಚೆಗೆ ನಡೆದ ಬೆಂಗಳೂರು ವಿಶ್ವವಿದ್ಯಾಲಯ ಅಂತರಕಾಲೇಜು ನೆಟ್‌ಬಾಲ್ ಟೂರ್ನಿಯಲ್ಲಿ ಪ್ರಶಸ್ತಿ ಪಡೆದ ಶೇಷಾದ್ರಿಪುರಂ ಪದವಿ ಕಾಲೇಜು ತಂಡ. ನಿಂತವರು: (ಎಡದಿಂದ) ತೇಜಸ್, ಸಂಜಯ್ ಪಟೋಲಿ, ರವಿಕುಮಾರ್, ಮುರಳಿ, ಚೇತನ್, ಎ. ರೂಪೇಶ್, ಡಿ. ಸಾತ್ವಿಕ್, ನವೀನ್ ಕುಮಾರ್, ಕಾರ್ತಿಕ್. ಕುಳಿತವರು: ಡಾ. ಆರ್. ಧನ್‌ಪಾಲ್ (ಕ್ರೀಡಾ ಕಾರ್ಯದರ್ಶಿ), ಪ್ರೊ. ಎಸ್.ಎನ್. ದೊರೈರಾಜ್ (ಪ್ರಾಂಶುಪಾಲರು), ವೂಡೇ ಪಿ.ಕೃಷ್ಣ (ಕಾರ್ಯದರ್ಶಿ, ಶೇಷಾದ್ರಿಪುರಂ ಶಿಕ್ಷಣ ದತ್ತಿ), ರೂಪೇಶ್, ಟಿ.ವಿ. ಸರಸ್ವತಿ (ದೈಹಿಕ ಶಿಕ್ಷಣ ನಿರ್ದೇಶಕರು).

ಪ್ರಜಾ ವಾಣಿ

ಸೋಮವಾರ, 22 ಜನವರಿ 2007



ಬೆಂಗಳೂರಿನ ಮಲ್ಲೇಶ್ವರದಲ್ಲಿ ಭಾನುವಾರ ನಡೆದ ವಿಶಾಲ ಹಿಂದೂ ಸಮಾಜೋತ್ಸವದಲ್ಲಿ (ಎಡದಿಂದ) ತುಮಕೂರು ರಾಮಕೃಷ್ಣ ಯೋಗಾಶ್ರಮದ ವೀರೇಶಾನಂದ ಸ್ವಾಮೀಜಿ, ಕೊಳದ ಮಠದ ಡಾ. ಶಾಂತವೀರ ಸ್ವಾಮೀಜಿ ಹಾಗೂ ಕೆಂಗೇರಿ ರಾಮಕೃಷ್ಣ ಮಠದ ಶಾರದಾನಂದ ಸ್ವಾಮೀಜಿ ಭಾಗವಹಿಸಿದ್ದರು. ಪ್ರಜಾವಾಣಿ ಚಿತ್ರ

# ಮತಾಂತರ ನಿಷೇಧ ಕಾಯ್ದೆಗೆ ಒತ್ತಾಯ

ಪ್ರಜಾವಾಣಿ ವಾರ್ತೆ

ಬೆಂಗಳೂರು: ದೇಶದಲ್ಲಿ ಮತಾಂತರವನ್ನು ನಿಷೇಧಿಸುವ ಕಾಯ್ದೆಯನ್ನು ಜಾರಿಗೊಳಿಸಬೇಕು ಎಂದು ನಗರಧ ವಿವಿಧೆಡೆ ಭಾನುವಾರ ನಡೆದ 'ವಿರಾಟ್ ಹಿಂದೂ ಸಮಾಜೋತ್ಸವ'ದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ (ಆರ್‌ಎಸ್‌ಎಸ್) ಆಗ್ರಹಿಸಿದೆ.

ಆರ್‌ಎಸ್‌ಎಸ್ ನಾಯಕರಾಗಿದ್ದ ಮಾಧವ ಸದಾಶಿವ ರಾವ್ ಗೋಳ್ವಾಲ್ಕರ್ (ಗುರೂಜಿ) ಅವರ ಜನ್ಮ ಶತಮಾನೋತ್ಸವ ಆಚರಣೆ ನಗರದ ಹಲಸೂರು, ಮಲ್ಲೇಶ್ವರ, ತ್ಯಾಗರಾಜನಗರಗಳಲ್ಲಿ ಏಕಕಾಲಕ್ಕೆ ನಡೆಯಿತು.

ಈ ಕಾರ್ಯಕ್ರಮಗಳ ನಿಮಿತ್ತ ನಗರದ ವಿವಿಧೆಡೆ ವರ್ಣರಂಜಿತ ಜನಪದ ಕಲಾತಂಡದ ಜತೆ ಆರ್‌ಎಸ್‌ಎಸ್ ಕಾರ್ಯಕರ್ತರ ಶೋಭಾಯಾತ್ರೆ ನಡೆಯಿತು.

ಮತಾಂತರ ನಿಷೇಧಿಸಿ: ನಗರದಲ್ಲಿ ಮತಾಂತರ ಪ್ರಮಾಣ ಹೆಚ್ಚುತ್ತಿರುವ ಬಗ್ಗೆ ಮಲ್ಲೇಶ್ವರದಲ್ಲಿ ನಡೆದ ಸಮಾಜೋತ್ಸವದಲ್ಲಿ ಆರ್‌ಎಸ್‌ಎಸ್ ಪ್ರಾಂತ ಕಾರ್ಯಕಾರಿಣಿ ಸದಸ್ಯ ಎಚ್.ಕೆ.ಮೋಹನ್‌ಕುಮಾರ್ ಖಂಡಿಸಿ, ಮತಾಂತರ ನಿಷೇಧ ಕಾಯ್ದೆ ಜಾರಿಗೆ ಆಗ್ರಹಿಸಿದರು.

ಹಿಂದೂ ಧರ್ಮಕ್ಕೆ ಮಾರಕವಾಗಿರುವ ಜಾತೀಯತೆ, ಸಾಂಸ್ಕೃತಿಕ ಅವನತಿ, ಭಯೋತ್ಪಾದನೆ ಹಾಗೂ ಮತಾಂತರಗಳ ವಿರುದ್ಧ ಸಮರ ಸಾರಬೇಕಾಗಿದೆ. ಮುಸ್ಲಿಮರು, ಕ್ರಿಶ್ಚಿಯನ್ನರು ಭಾರತೀಯರೇ. ಅವರನ್ನು ಮುಖ್ಯವಾಹಿನಿಗೆ ತರಲು ಸರ್ಕಾರಗಳು ಯತ್ನಿಸಬೇಕು ಎಂದು ಹೇಳಿದರಲ್ಲದೆ, ಹಿಂದೂ ಸಮಾಜದಲ್ಲಿನ ಜಾತೀಯತೆ ನಿವಾರಿಸಬೇಕು ಹಾಗೂ ನಮ್ಮ ಸಾಂಸ್ಕೃತಿಕ ಅವನತಿ ಕುರಿತು ಎಚ್ಚರಗೊಳ್ಳಬೇಕು ಎಂದರು.

'ಮುಸ್ಲಿಮರೆಲ್ಲರೂ ಭಯೋತ್ಪಾದಕರಲ್ಲ. ಆದರೆ, ಭಯೋತ್ಪಾದನೆಯಲ್ಲಿ ತೊಡಗಿರುವವರೆಲ್ಲರೂ ಮುಸ್ಲಿಮರೇ ಎನ್ನುವುದು ಆತಂಕಕಾರಿ' ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ನಟ ವಿಜಯ ರಾಘವೇಂದ್ರ, ಕೊಳದ ಮಠದ ಡಾ.ಶಾಂತವೀರಸ್ವಾಮಿ, ಕೆಂಗೇರಿ ರಾಮಕೃಷ್ಣಾಶ್ರಮ ಶಾರದಾತ್ಮನಂದ ಸ್ವಾಮೀಜಿ, ಗದಗ ರಾಮಕೃಷ್ಣ ಯೋಗಾಶ್ರಮದ ನಿರ್ಭಯಾನಂದ ಸ್ವಾಮೀಜಿ, ತುಮಕೂರು ರಾಮಕೃಷ್ಣಯೋಗಾಶ್ರಮದ ವೀರೇಶಾನಂದ ಮಹಾರಾಜ್, ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಭಾಗವಹಿಸಿದ್ದರು.

ನೆಲವನ್ನು ಪ್ರೀತಿಸಿ: 'ಈ ರಾಷ್ಟ್ರದಲ್ಲಿ ಬಾಳುವ ಪ್ರತಿಯೊಬ್ಬ ಪ್ರಜೆಯು ನೆಲದ ಮಣ್ಣನ್ನು ಪ್ರೀತಿಸಿ, ಸಂಸ್ಕೃತಿ ಮತ್ತು ಪರಂಪರೆಯನ್ನು ಗೌರವಿಸಬೇಕು' ಎಂದು ರಾಷ್ಟ್ರೀಯ ಸ್ವಯಂ ಸೇವಕ ಸಂಘದ (ದಕ್ಷಿಣ) ಪ್ರಾಂತ ಕಾರ್ಯವಾಹಕ ಕೆ.ಪ್ರಭಾಕರ್ ಭಟ್ ಹೇಳಿದರು.

ನಗರದ ಹಲಸೂರಿನಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘ 'ವಿರಾಟ್ ಹಿಂದೂ ಸಮಾಜೋತ್ಸವ'ದಲ್ಲಿ ಭಾಗವಹಿಸಿ ಮಾತನಾಡಿದರು.

ದೇಶ ಉಳಿದರೆ ಮಾತ್ರ ಜನರು ಗೌರವಯುತವಾಗಿ ಬಾಳಲು ಸಾಧ್ಯ ಎಂದು ಹೇಳಿದ ವಿಭೂತಿಪುರ ಮಹಾಂತಲಿಂಗ ಶಿವಾಚಾರ್ಯ ಸ್ವಾಮೀಜಿ, ದೇಶ ಸಂಸ್ಕೃತಿಯನ್ನು ಉಳಿಸುವ ಕಾರ್ಯವನ್ನು ರಾಷ್ಟ್ರದ ಯುವಕರು ಮಾಡಬೇಕು ಎಂದು ಕರೆ ನೀಡಿದರು.

ತಮಿಳುನಾಡಿನ ಹಿಂದು ಮುನ್ನಾನಿ ಸಂಘಟನೆ ಮುಖಂಡ ರಾಮಗೋಪಾಲನ್, ಆಂಧ್ರಪ್ರದೇಶದ 'ಭಾರತೀಯಂ' ಸಂಘಟನೆ ಸ್ಥಾಪಕಿ ಜಿ. ಸತ್ಯವಾಣಿ, ಸಮಾಜೋತ್ಸವ ಸ್ವಾಗತ ಸಮಿತಿ ಅಧ್ಯಕ್ಷೆ ಜಯ ಕೌಶಲ್ಯ ಹಾಗೂ ನಟ ಸಾಯಿಕುಮಾರ್ ಹಾಜರಿದ್ದರು.

ತ್ಯಾಗರಾಜನಗರದಲ್ಲಿನ ಕಾರ್ಯಕ್ರಮದಲ್ಲಿ ರಾಮಕೃಷ್ಣ ಮಠದ ಹರ್ಷಾನಂದ ಸ್ವಾಮಿ, ವಿಎಚ್‌ಪಿ ಸಂಘಟನಾ ಕಾರ್ಯದರ್ಶಿ ಕೇಶವ ಹೆಗಡೆ, ನಟ ಮಾಸ್ಟರ್ ಹಿರಣ್ಣಯ್ಯ, ಕವಿ ದೊಡ್ಡರಂಗೇಗೌಡ ಹಾಜರಿದ್ದರು.

# ಕಾಲೇಜು ಅಂಗಳದಲ್ಲಿ ಅರಳಿದ 'ಸ್ಪರ್ಶ'

ಅಂತರ್‌ಕಾಲೇಜು ಹಬ್ಬವೆಂಬುದು ಕಾಲೇಜುಗಳಲ್ಲಿ ಅತ್ಯಂತ ಜನಪ್ರಿಯ. ಹಾಗೆಯೇ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜು ಅಂತರ್



ಡೊಳ್ಳು ಕುಣಿತ ಉದ್ಘಾಟನಾ ಸಮಾರಂಭದಲ್ಲಿ ಶೇಷಾದ್ರಿಪುರ ಪದವಿಪೂರ್ವ ಕಾಲೇಜು ತಂಡ.

ಕಾಲೇಜು ಹಬ್ಬದ ಪರಿಕಲ್ಪನೆಯನ್ನೇ ಹೊಸದಾಗಿ ಬರೆಯುವ ಮೂಲಕ, ಒಂದು ಹೊಸ ಹೆಜ್ಜೆ, ಹೊಸ ಹಾದಿಯನ್ನು ನಿರ್ಮಿಸಿ 'ಸ್ಪರ್ಶ-2006-07' ಎಂಬ ಶೀರ್ಷಿಕೆಯಡಿ ಕಾಲೇಜು ಅಂಗಳದಲ್ಲಿ ಇತ್ತೀಚೆಗೆ ಈ ಹಬ್ಬವನ್ನು ಸಂಘಟಿಸಿತ್ತು.

ಈ ಪರಿಕಲ್ಪನೆಯನ್ನು ರೂಪಿಸಿದವರು ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕ ಎಲ್.ಎನ್. ಗೋಪಾಲಕೃಷ್ಣ. ಈ ಪರಿಕಲ್ಪನೆಯನ್ನು ಸಾಕಾರಗೊಳಿಸಿದವರು ಕಾಲೇಜಿನ ವಿದ್ಯಾರ್ಥಿಗಳು. ಈ ಹಬ್ಬವನ್ನು ಬೆಂಬಲಿಸಿದವರು ಕಾಲೇಜಿನ ಪ್ರಾಂಶುಪಾಲರಾದ ಎಂ.ಆರ್. ಶ್ರೀನಿವಾಸ್, ಅಧ್ಯಾಪಕ ಮಂಡಿ ಕಾರ್ಯದರ್ಶಿ ಮಾಥ್ಯೂ ಪಿ. ಥಾಮಸ್ ಹಾಗೂ ಯುವ ಅಧ್ಯಾಪಕರ ತಂಡ.

ಈ ಹೊಸ ಪರಿಕಲ್ಪನೆಯಿಂದ ಖುಷಿಗೊಂಡು ತಮ್ಮ ಸಹಾಯ ಹಸ್ತ ನೀಡಿದವರು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಆಡಳಿತ ಮಂಡಳಿಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಜಮಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ ಮತ್ತು ಕಾಲೇಜು ಆಡಳಿತ ಸಮಿತಿ ಅಧ್ಯಕ್ಷ ಬಿ.ಎಂ. ಪಾರ್ಥಸಾರಥಿ.

ಸ್ಫೂರ್ತಿದಾಯಕ ಪುಸ್ತಕಗಳ ಬಗ್ಗೆ ಗಮನ, ರಕ್ತದಾನ, ವಿಕಲಚೇತನ ಮತ್ತು ಮನೋವಿಕಲ ಮಕ್ಕಳ ಕಷ್ಟಗಳು,

ನಗರ ಸಮಸ್ಯೆಗಳು, ಮಕ್ಕಳನ್ನು ದುಡಿಮೆಗೆ ಹಚ್ಚುವುದು, ಕನ್ನಡ ಭಾಷೆ ಉಳಿಸುವುದು, ಮಾನವೀಯ ಹಕ್ಕುಗಳ ರಕ್ಷಣೆ, ವೈಚಾರಿಕ ಹಾಗೂ ಮದ್ಯಪಾನ ವಿರೋಧ, ಏಡ್ಸ್ ರೋಗದ ಸಮಸ್ಯೆ, ಮಾನವೀಯ ಸಂಬಂಧಗಳ ಶಿಥಿಲತೆ ಬಗ್ಗೆ ಕಾಳಜಿ. ಇತ್ಯಾದಿ ವಿಷಯಗಳನ್ನು ಹಬ್ಬ ಒಳಗೊಂಡಿತ್ತು. ಚರ್ಚಾಸ್ಪರ್ಧೆ, ಪ್ರಬಂಧ ಸ್ಪರ್ಧೆ, ಉಪನ್ಯಾಸ ಸ್ಪರ್ಧೆ, ಕೊಲಾಜ್ ಮಾಡುವ ಸ್ಪರ್ಧೆಗಳಲ್ಲಿ ಸಾಮಾಜಿಕ ವಿಷಯಗಳನ್ನು ಅಳವಡಿಸಲಾಗಿತ್ತು.

ವಿಶೇಷ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಲು ನುರಿತ ಕಲಾ ತಂಡಗಳನ್ನು ಆಹ್ವಾನಿಸಲಾಗಿತ್ತು. ಕೀ.ರಂ. ನಾಗರಾಜರ ನಾಟಕ 'ಕಾಲಜ್ಞಾನಿ ಕನಕ', ಶ್ರೀ ರಮಣ ಮಹರ್ಷಿ ಶಾಲೆಯ ಅಂಧ ಮಕ್ಕಳ ನೃತ್ಯ ಪ್ರದರ್ಶನ, ಜಾನಪದ ಕಲೆಗಳಾದ ಡೊಳ್ಳು ಕುಣಿತ, ವೀರಗಾಸೆ, ಡಾಕ್ಯುಮೆಂಟರಿ ಚಲನಚಿತ್ರಗಳು-ಹೀಗೆ ಹಲವು ಕಾರ್ಯಕ್ರಮಗಳನ್ನು ಪ್ರದರ್ಶಿಸಲಾಗಿತ್ತು.

ಸಮಾಜ ಸೇವೆಗೆ ಪ್ರೇರೇಪಿಸುವ 'ಐ-ವಾಲಂಟೀರ್' ಸಂಸ್ಥೆ, ಕರ್ನಾಟಕ ಮದ್ಯಪಾನ ವಿರೋಧಿ ಒಕ್ಕೂಟ, ಬುದ್ಧಿಮಾಂದ್ಯ ಮಕ್ಕಳಿಗಾಗಿರುವ 'ಸೃಷ್ಟಿ ಸ್ಪೆಷಲ್ ಅಕಾಡೆಮಿ', ನಗರ ಸಮಸ್ಯೆಗಳ ಬಗ್ಗೆ ಕೆಲಸ ಮಾಡುತ್ತಿರುವ 'ಸಿವಿಕ್' ಸಂಸ್ಥೆ, ಮಾನವೀಯ ಹಕ್ಕುಗಳ ಶಿಕ್ಷಣಕ್ಕಾಗಿರುವ 'ಸಿಕ್ರಂ' ಸಂಸ್ಥೆ, ದುಡಿಯುವ ಮಕ್ಕಳ ಬಗ್ಗೆ ಕಾಳಜಿ ಇರುವ ಸಿ.ಡಬ್ಲ್ಯು.ಸಿ. ಮತ್ತಿತರ ಸಂಸ್ಥೆಗಳು ಬ್ಯಾನರ್, ಪೋಸ್ಟರ್, ಸಾಹಿತ್ಯ ಚಿತ್ರಗಳನ್ನು ಪ್ರದರ್ಶಿಸಿ, ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸಿ ಸಮಾಜ ಸೇವೆಗೆ ಪ್ರೇರೇಪಿಸಿದರು.

ಹಬ್ಬದ ಉದ್ಘಾಟನೆ ಮತ್ತು ಸಮಾರೋಪ ಸಮಾರಂಭಗಳಲ್ಲೂ ಸಾಮಾಜಿಕ ಹಾಗೂ ಮಾನವೀಯ ವಿಷಯಗಳ ಬಗ್ಗೆ ಗಮನ ಹರಿಸುವಂತೆ ಈ ಕಾರ್ಯಕ್ರಮಗಳನ್ನು ರೂಪಿಸಿದ್ದು ಹಬ್ಬದ ವಿಶೇಷವಾಗಿತ್ತು.

ಸಮಾಜ ಸೇವೆಯಲ್ಲಿ ಜೀವಂತ ದಂತಕತೆಯಾಗಿರುವ ರೈಟ್ ಲೈವ್ಲಿಹುಡ್ ಪ್ರಶಸ್ತಿ ಪುರಸ್ಕೃತ ಡಾ. ಎಚ್. ಸುದರ್ಶನ್ ಅವರು ಹಬ್ಬವನ್ನು ಉದ್ಘಾಟಿಸಿದರು. ರಾಜ್ಯ ಲೋಕಾಯುಕ್ತ ಜಸ್ಟೀಸ್ ಎನ್. ಸಂತೋಷ್ ಹೆಗಡೆ ಸಮಾರೋಪ ಭಾಷಣ ಮಾಡಿದರು.

ಇಡೀ ಕಾರ್ಯಕ್ರಮಕ್ಕೆ ಶಿಖರಪ್ರಾಯವಾಗಿದ್ದು, ಲೋಕಾಯುಕ್ತರು ನಡೆಸಿದ ಒಂದು ಗಂಟೆ ಕಾಲದ ಪ್ರಶ್ನೋತ್ತರ ಕಾರ್ಯಕ್ರಮ. 1300 ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತಿದ್ದ ಆವರಣದಲ್ಲಿ ವಿದ್ಯಾರ್ಥಿಗಳ ವೈವಿಧ್ಯಮಯ, ಕಾಳಜಿಯುಕ್ತ ಚುರುಕಾದ ಪ್ರಶ್ನೆಗಳು ವೇದಿಕೆ ಮೇಲಿದ್ದ ಹಿರಿಯರನ್ನು ಮಂತ್ರಮುಗ್ಧಗೊಳಿಸಿದವು. ವಿದ್ಯಾರ್ಥಿಗಳು ಹೊಸ ವರ್ಷದ ಮುನ್ನಾದಿನ ಸಿದ್ಧಪಡಿಸಿದ ಪುಟ್ಟ, ಸುಂದರ ಸ್ಮರಣ ಸಂಚಿಕೆಯು ಹಬ್ಬದ ಮತ್ತೊಂದು ವಿಶೇಷವಾಗಿತ್ತು.

'ಮೂಕ ಸಾಲು ಅಭಿನಯ', 'ಹುಚ್ಚುಚ್ಚಾಟದ ಜಾಹೀರಾತು' ಸ್ಪರ್ಧೆಗಳು, 'ಚಲನಚಿತ್ರ ದೃಶ್ಯಗಳ ಗೇಲಿ' ಸ್ಪರ್ಧೆ, ಅಂತ್ಯಾಕ್ಷರಿ, ಪಾಶ್ಚಿಮಾತ್ಯ ನೃತ್ಯ ಸ್ಪರ್ಧೆ, ಕಂಪ್ಯೂಟರ್‌ನಲ್ಲಿ ಆಟ ಸ್ಪರ್ಧೆ ಇತ್ಯಾದಿಗಳೊಂದಿಗೆ ಎರಡೂ ದಿನಗಳೂ ಸಂಜೆ ಜನಪ್ರಿಯ ಪಾಶ್ಚಿಮಾತ್ಯ ಸಂಗೀತದ 'ಪ್ರದರ್ಶನ'ಗಳೂ ಇದ್ದವು. ಕುಡುಮಿಗಳಿಗೆ ಹುಸಿ ಸಿ.ಇ.ಟಿ. ಪರೀಕ್ಷೆಗಳನ್ನೂ ಏರ್ಪಡಿಸಲಾಗಿತ್ತು.



ರಮಣ ಮಹರ್ಷಿ ಅಂಧ ಮಕ್ಕಳ ಶಾಲೆ ವಿದ್ಯಾರ್ಥಿನಿಯರಿಂದ ನೃತ್ಯ ಪ್ರದರ್ಶನ.

ಸಂಜೆವಾಣಿ
ಶನಿವಾರ 20 ಜನವರಿ 2007



ಶೇಷಾದ್ರಿಪುರಂ ಪದವಿ ಕಾಲೇಜಿನ ಪುರುಷರ ನೆಟ್‌ಬಾಲ್ ತಂಡವು ಇತ್ತೀಚೆಗೆ ನಡೆಸಿದ ಬೆಂಗಳೂರು ವಿಶ್ವವಿದ್ಯಾಲಯ ಅಂತರ ಕಾಲೇಜು ನೆಟ್‌ಬಾಲ್ ಪಂದ್ಯಾವಳಿಯಲ್ಲಿ ವಿಜೇತರಾದ ತಂಡ.

ಕನ್ನಡಪ್ರಭ

# ಬೆಂಗಳೂರು

ಶನಿವಾರ, 13 ಜನವರಿ 2007

ಪುಟ 2

**ನಗರದ ಹವಾಮಾನ**

■ ಶುಭ್ರ ವಾತಾವರಣ

● ಇಂದು ಗರಿಷ್ಠ ಉಷ್ಣಾಂಶ 26 ಡಿ. ಸೆ. ಸಾಧ್ಯತೆ

ನಿನ್ನೆ ದಾಖಲಾದ ಉಷ್ಣಾಂಶ

■ ನಗರ ಗರಿಷ್ಠ 25.2 ■ ಕನಿಷ್ಠ 15.7 ಡಿಗ್ರಿ ಸೆಲ್ಸಿಯಸ್



**ವಾರ್ಷಿಕೋತ್ಸವ**

ನಗರದ ಐಯ್ಯರ್ ಪ್ರೌಢಶಾಲೆ ಮತ್ತು ಡಾ. ಎಂ.ಸಿ. ಮೋದಿ ಹಿರಿಯ ಪ್ರಾಥಮಿಕ ಶಾಲೆಯ ವಾರ್ಷಿಕೋತ್ಸವ ಸಮಾರಂಭದಲ್ಲಿ ಶಾಸಕ ಎಂ.ಆರ್. ಸೀತಾರಾಂ, ಶೇಷಾದ್ರಿಪುರ ಎಜುಕೇಷನ್ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ. ಪಿ. ಕೃಷ್ಣ ಮತ್ತು ಚಿತ್ರನಟಿ ಜಯಮಾಲಾ ಇದ್ದಾರೆ.

'ಪ್ರಜಾಪ್ರಗತಿ' ಕನ್ನಡ ದಿನಪತ್ರಿಕೆ
ದಿನಾಂಕ 11, ಜನವರಿ 2007 ಗುರುವಾರ

# ಉಪನ್ಯಾಸ ಕಾರ್ಯಕ್ರಮ

**ಶಿರಾ**

ಪಟ್ಟಣದ ಸರ್ಕಾರಿ ಪ.ಪೂರ್ವ ಕಾಲೇಜಿನಲ್ಲಿ ಕೆ.ಆರ್.ಎಸ್. ಪ್ರತಿಷ್ಠಾನ ಅಮೇರಿಕಾ/ಬೆಂಗಳೂರು ಇವರ ಆಶ್ರಯದಲ್ಲಿ ಇಂದು (ಜ.11) ಪಿ.ಯು.ಸಿ. ವಿದ್ಯಾರ್ಥಿಗಳಿಗಾಗಿ ಮಾನಸಿಕ ಆರೋಗ್ಯದ ಬಗ್ಗೆ ಉಪನ್ಯಾಸ ಕಾರ್ಯಕ್ರಮ ಏರ್ಪಡಿಸಲಾಗಿದೆ.

ಬೆಂಗಳೂರು ಶೇಷಾದ್ರಿ ಪುರಂ ಎಜುಕೇಶನ್ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ಪ್ರೊಡೇ ಪಿ. ಕೃಷ್ಣಪ್ಪ ಅಧ್ಯಕ್ಷತೆ ವಹಿಸುವ ಕಾರ್ಯಕ್ರಮ ಬೆಳಿಗ್ಗೆ 9:30ಕ್ಕೆ ಆರಂಭಗೊಳ್ಳಲಿದೆ.

ಬೆಂಗಳೂರು ನಿಮ್ಹಾನ್ಸ್‌ನ ಮನೋವಿಜ್ಞಾನದ ಪ್ರಾಧ್ಯಾಪಕ ಡಾ.ಸಿ.ಆರ್.ಚಂದ್ರಶೇಖರ್, ಕೆ.ಆರ್.ಎಸ್.ಪ್ರತಿಷ್ಠಾನದ ಸಂಚಾಲಕ ಎ.ಆರ್.ಶ್ರೀನಿವಾಸಯ್ಯ, ಹಿರಿಯ ವಕೀಲರಾದ ಟಿ.ಎನ್.ಮಂಜುಳಾ, ಪ್ರಾಂಶುಪಾಲ ಎಸ್.ಆರ್.ಅಶೋಕ್ ಕುಮಾರ್ ಮುಖ್ಯ ಅತಿಥಿಗಳಾಗಿ ಪಾಲ್ಗೊಳ್ಳುವರು.



ಶೇಷಾದ್ರಿಪುರ ಕಾಲೇಜಿನಲ್ಲಿ ಬುಧವಾರ ಆಯೋಜಿಸಿದ್ದ ಅಂತರ ಕಾಲೇಜು ಸಾಂಸ್ಕೃತಿಕ ಸ್ಪರ್ಧೆಯಲ್ಲಿ ಪಾಲ್ಗೊಂಡಿದ್ದ ವಿದ್ಯಾರ್ಥಿಗಳ ಜತೆ ಲೋಕಾಯುಕ್ತ ಸಂತೋಷ್ ಹೆಗ್ಡೆ ಸಂವಾದ.

ಪ್ರಜಾವಾಣಿ
ಗುರುವಾರ, 04 ಜನವರಿ 2007

# ಭ್ರಷ್ಟಾಚಾರದ ಪ್ರಶ್ನೆ ಎದುರಿಸಿದ ಲೋಕಾಯುಕ್ತ

ಪ್ರಜಾವಾಣಿ ವಾರ್ತೆ



ಬೆಂಗಳೂರಿನ ಶೇಷಾದ್ರಿಪುರ ಪದವಿಪೂರ್ವ ಕಾಲೇಜಿನಲ್ಲಿ ಬುಧವಾರ ನಡೆದ ಅಂತರಕಾಲೇಜು ಸಾಮಾಜಿಕ-ಸಾಂಸ್ಕೃತಿಕ ಹಬ್ಬದ ಸಮಾರೋಪ ಸಮಾರಂಭಕ್ಕೆ ಲೋಕಾಯುಕ್ತ ನ್ಯಾಯಮೂರ್ತಿ ಎನ್.ಸಂತೋಷ್ ಹೆಗ್ಡೆ ಅವರನ್ನು ವಿದ್ಯಾರ್ಥಿಗಳು ಸಂತಸದಿಂದ ಬರಮಾಡಿಕೊಂಡರು. —ಪ್ರಜಾವಾಣಿ ಚಿತ್ರ

ಬೆಂಗಳೂರು: ಲೋಕಾಯುಕ್ತರು ದಾಳಿ ಮಾಡಿದಾಗ ವಶಪಡಿಸಿಕೊಳ್ಳುವ ಹಣ, ಆಸ್ತಿ ಎಲ್ಲವನ್ನು ಏನ್ಮಾಡ್ತಾರೆ? ನೀವ್ಯಾಕೆ ವೆಂಕಟಾಚಲ ಅವರಷ್ಟು ದಾಳಿ ನಡೆಸ್ತಿಲ್ಲ? ನಿಮ್ಮ ವಿರುದ್ಧವೇ ಭ್ರಷ್ಟಾಚಾರದ ಆರೋಪ ಬಂದ್ರೆ?...

ಇಂಥದ್ದೊಂದು ಪ್ರಶ್ನಾವಳಿಯನ್ನು ಲೋಕಾಯುಕ್ತ ನ್ಯಾಯಮೂರ್ತಿ ಎನ್. ಸಂತೋಷ್ ಹೆಗ್ಡೆ ಅವರು ಬುಧವಾರ ಇಲ್ಲಿ ವಿದ್ಯಾರ್ಥಿಗಳಿಂದ ಎದುರಿಸಿದರು.

ನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ಆಯೋಜಿಸಿದ್ದ ಅಂತರ ಕಾಲೇಜು ಸಾಮಾಜಿಕ-ಸಾಂಸ್ಕೃತಿಕ ಹಬ್ಬದ ಸಮಾರೋಪ ಸಮಾರಂಭದಲ್ಲಿ ಲೋಕಾಯುಕ್ತ ನ್ಯಾಯಮೂರ್ತಿಗಳು ವಿದ್ಯಾರ್ಥಿಗಳೊಡನೆ ಸಂವಾದ ನಡೆಸಿದ ಸಂದರ್ಭದಲ್ಲಿ ಇಂಥ ಪ್ರಶ್ನೆಗಳನ್ನು ಎದುರಿಸಿದರು.

'ದಾಳಿ ವೇಳೆ ವಶಪಡಿಸಿಕೊಳ್ಳಲಾಗುವ ಹಣ, ಒಡವೆ ಮೊದಲಾದ ವಸ್ತುಗಳನ್ನು ಸೀಲ್ ಮಾಡಿ, 'ಪಂಚನಾಮೆ' ಬರೆದು, ಪ್ರಕರಣ ನ್ಯಾಯಾಲಯದಲ್ಲಿ ಇತ್ಯರ್ಥ ಆಗುವವರೆಗೆ ಲೋಕಾಯುಕ್ತ ಕಚೇರಿಯ 'ಮಾಲ್ಖಾನ'ದಲ್ಲಿ ಮೊಹರು ಮಾಡಿ ಭದ್ರವಾಗಿ ಇರಿಸಲಾಗುತ್ತದೆ ಎಂದು ಲೋಕಾಯುಕ್ತರು ವಿದ್ಯಾರ್ಥಿಗಳ ಸಂದೇಹ ಬಗೆಹರಿಸಿದರು.

'ನಾನು ಅಧಿಕಾರಕ್ಕೆ ಬಂದ ಆರು ತಿಂಗಳ ಅವಧಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಧಿಕಾರಿಗಳನ್ನು ಟ್ರ್ಯಾಪ್ ಮಾಡಿದ್ದೇನೆ. ಆಗಿನ ಲೋಕಾಯುಕ್ತರು ಕಾನೂನಿನ ಬಗ್ಗೆ ತಿಳಿದುಕೊಂಡಿರುವುದಕ್ಕೂ ನಾನು ಕಾನೂನನ್ನು ಅರ್ಥ ಮಾಡಿಕೊಂಡಿರುವುದಕ್ಕೂ ತುಂಬಾ ವ್ಯತ್ಯಾಸ ಇದೆ. ಇಷ್ಟಕ್ಕೂ ದಾಳಿ ನಡೆಸಲು ಲೋಕಾಯುಕ್ತ ಕಾಯ್ದೆಯಲ್ಲಿ ಲೋಕಾಯುಕ್ತರಿಗೆ ಯಾವ ಅಧಿಕಾರ ಇಲ್ಲ. ನಾವು (ಲೋಕಾಯುಕ್ತರು) ಲೋಕಾಯುಕ್ತ ಪೊಲೀಸರಿಗೆ ಸರ್ಚ್ ವಾರಂಟ್ ಕೊಡುತ್ತೇವೆ. ನಾವೇ ದಾಳಿ ನಡೆಸುವುದಿಲ್ಲ' ಎಂದು ಲೋಕಾಯುಕ್ತರಿಗೆ ಇರುವ ಅಧಿಕಾರದ ಪರಿಮಿತಿಯನ್ನು ವಿವರಿಸಿದರು.

'ನಿಮ್ಮ ವಿರುದ್ಧವೇ ಭ್ರಷ್ಟಾಚಾರದ ಆರೋಪ ಬಂದ್ರೆ ಏನ್ಮಾಡ್ತೀರಿ? ಎಂಬ ವಿದ್ಯಾರ್ಥಿಯೊಬ್ಬರ ಪ್ರಶ್ನೆಗೆ, 'ಲೋಕಾಯುಕ್ತ ಹುದ್ದೆ ಸ್ವೀಕರಿಸಿದ ಸಂದರ್ಭದಲ್ಲೇ ವೆಬ್‌ಸೈಟ್‌ನಲ್ಲಿ ನನ್ನ ಬಳಿ ಇರುವ ಆಸ್ತಿಯನ್ನು ಬಹಿರಂಗ ಪಡಿಸಿದ್ದೇನೆ. ಒಂದು ಮನೆಯಿದೆ. ನನ್ನ ಆದಾಯ ಮೂಲವೇ ವೇತನ. ನಿವೃತ್ತಿ ನಂತರ ಜೀವನ ನಡೆಸಲು ಪಿಂಚಣಿ ಹಣ ಸಾಕು' ಎಂದು ಸಂತೋಷ್ ಹೆಗ್ಡೆ ಪ್ರತಿಕ್ರಿಯಿಸಿದರು.

ಕಷ್ಟಪಟ್ಟು, ಪ್ರಾಮಾಣಿಕವಾಗಿ ಸಂಪಾದಿಸದ 'ಶ್ರೀಮಂತಿಕೆ' ಅರ್ಥ ಇಲ್ಲದು. ಕಾನೂನು ಚೌಕಟ್ಟಿನೊಳಗೇ ಸಂಪಾದಿಸಿ ಶ್ರೀಮಂತರಾಗಬೇಕು ಎಂಬುದನ್ನು ಯುವ ಜನತೆ ಅರಿತುಕೊಂಡಾಗ ಭ್ರಷ್ಟಾಚಾರ ಕಡಿಮೆಯಾಗಬಲ್ಲುದು ಎಂದು ಪ್ರತಿಪಾದಿಸಿದರು. ಸಮಾರಂಭದಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ. ಟಿ.ಕೃಷ್ಣ, ಜಂಟಿ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಬಿ.ಎಂ. ಪಾರ್ಥಸಾರಥಿ ಹಾಗೂ ಪ್ರಾಚಾರ್ಯ ಪ್ರೊ. ಎಂ.ಆರ್.ಶ್ರೀನಿವಾಸ್ ಉಪಸ್ಥಿತರಿದ್ದರು.

ಅಂತರ ಕಾಲೇಜು ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಇದೇ ಸಂದರ್ಭದಲ್ಲಿ ಬಹುಮಾನ ವಿತರಿಸಲಾಯಿತು. ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿ ಮುಕುಂದ್ ತಿವಾರಿ ಅವರನ್ನೂ ಸನ್ಮಾನಿಸಲಾಯಿತು. ನಂತರ, ತಾಕ್ ಅಂಡ್ ಸೀರ್ಘುರ್ ಪ್ಯಾಲೇಸ್ ತಂಡ ಸಂಗೀತ ಕಾರ್ಯಕ್ರಮ ನೀಡಿತು.












ವಿಜಯ ಕರ್ನಾಟಕ, ಬೆಂಗಳೂರು
ಬುಧವಾರ 3 ಜನವರಿ 2007



# ಸಂಸ್ಕೃತಿ, ಮಾನವೀಯ ಮೌಲ್ಯ ಕುಸಿತ: ಆತಂಕ

ಬೆಂಗಳೂರು, ಜ. 2 - ಜಾಗತೀಕರಣದ ಪ್ರಭಾವದಿಂದ ದೇಶದ ಸಂಸ್ಕೃತಿ ಮತ್ತು ಮಾನವೀಯ ಮೌಲ್ಯಗಳು ಕುಸಿಯುತ್ತಿವೆ ಎಂದು ರೈಟ್ ಲೈವ್ಲಿಹುಡ್ ಪ್ರಶಸ್ತಿ ಪುರಸ್ಕೃತ ಡಾ. ಎಚ್. ಸುದರ್ಶನ್ ಆತಂಕ ವ್ಯಕ್ತಪಡಿಸಿದ್ದಾರೆ.

ಜಾಗತೀಕರಣದಲ್ಲಿ ಸಕಾರಾತ್ಮಕ ಹಾಗೂ ನಕಾರಾತ್ಮಕ ಎರಡೂ ಅಂಶಗಳಿವೆ. ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಅನು ಸರಿಸುವ ಬದಲಾಗಿ ಅದರ ಸಕಾರಾತ್ಮಕ ಪ್ರಯೋಜನ ಪಡೆಯಬೇಕು ಎಂದು ಶೇಷಾದ್ರಿಪುರಂ ಕಾಲೇಜು ಏರ್ಪಡಿಸಿದ್ದ 'ಅಂತರ ಕಾಲೇಜು ಸಾಂಸ್ಕೃತಿಕ - ಸಾಮಾಜಿಕ ಹಬ್ಬ'ದಲ್ಲಿ ಮಂಗಳವಾರ ಅವರು ಹೇಳಿದರು.

ಪ್ರಸ್ತುತ ಸಮಾಜದಲ್ಲಿ ಭ್ರಷ್ಟಾಚಾರ, ಅಸಮಾನತೆ ಸೇರಿದಂತೆ ಸಾಕಷ್ಟು ಸಮಸ್ಯೆಗಳಿವೆ. ಈ ಎಲ್ಲ ಸಾಮಾಜಿಕ ಸಮಸ್ಯೆಗಳ ವಿರುದ್ಧ ಹೋರಾಡುವ ಕೆಲಸ ಯುವಜನರಿಂದ ಆಗಬೇಕು ಎಂದು ಹೇಳಿದರು.

ಜನ ಸಾಮಾನ್ಯರು ಚುನಾವಣೆ ಸಂದರ್ಭದಲ್ಲಿ ಯಾವುದೇ ಕಾರಣಕ್ಕೂ ಅಪರಾಧ ಹಿನ್ನೆಲೆ ಇರುವ ರಾಜಕಾರಣಿಗಳಿಗೆ ಮತ ಹಾಕಬಾರದು ಎಂದು ಸಲಹೆ ನೀಡಿದರು.

ಶಾಸಕ ದಿನೇಶ್ ಗುಂಡೂರಾವ್, 'ವಿದ್ಯಾರ್ಥಿಗಳು ಕಾಲೇಜು ಜೀವನವನ್ನು ಅನುಭವಿಸುವ ಜತೆಗೆ ಸ್ವಾಭಿಮಾನ, ಧೈರ್ಯ, ಪ್ರಾಮಾಣಿಕತೆ ಮತ್ತು ಹೋರಾಟದ ಮನೋಭಾವಗಳನ್ನು ಮೈಗೂಡಿಸಿಕೊಳ್ಳಬೇಕು. ಪರಿಸರ, ಭಾಷೆ, ಸಂಸ್ಕೃತಿಯ ರಕ್ಷಣೆಗೆ ಪಣತೊಡಬೇಕು' ಎಂದು ತಿಳಿಸಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ, ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಪ್ರೊ. ಎಂ.ಆರ್. ಶ್ರೀನಿವಾಸ್, ಆಡಳಿತ ಮಂಡಳಿ ಅಧ್ಯಕ್ಷ ಬಿ.ಎಂ. ಪಾರ್ಥಸಾರಥಿ ಸೇರಿದಂತೆ ನಗರದ ನಾನಾ ಕಾಲೇಜುಗಳ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

**ಸಾಂಸ್ಕೃತಿಕ ಸ್ಪರ್ಶ:** ನಗರದಲ್ಲಿ ಶೇಷಾದ್ರಿಪುರ ಕಾಲೇಜು ಎರಡು ದಿನಗಳ ಕಾಲ ಹಮ್ಮಿಕೊಂಡಿರುವ ಅಂತರ ಕಾಲೇಜು ಮಟ್ಟದ ಸಾಂಸ್ಕೃತಿಕ - ಸಾಮಾಜಿಕ ಹಬ್ಬವನ್ನು 'ಸ್ಪರ್ಶ-2006-07' ಹೆಸರಿನಲ್ಲಿ ಆಚರಿಸಲಾಗುತ್ತಿದೆ.

ಪ್ರಸ್ತುತ ಕಾಲೇಜು ವಿದ್ಯಾರ್ಥಿಗಳು ಪಾಶ್ಚಿಮಾತ್ಯ ಸಂಸ್ಕೃತಿಗೆ ಮಾರು ಹೋಗುತ್ತಿರುವ ಹಿನ್ನೆಲೆಯಲ್ಲಿ ಈ ಹಬ್ಬ ವಿಶೇಷ ಮಾನ್ಯತೆ ಪಡೆದಿದೆ.

ನಗರದ ಸುಮಾರು 54 ಕಾಲೇಜುಗಳ ವಿದ್ಯಾರ್ಥಿಗಳು ಇದರಲ್ಲಿ ಭಾಗವಹಿಸಿದ್ದಾರೆ. ಹಬ್ಬದ ಮತ್ತೊಂದು ವೈಶಿಷ್ಟ್ಯವೆಂದರೆ, ಡೊಳ್ಳು ಕುಣಿತ, ವೀರಗಾಸೆ ಸೇರಿದಂತೆ ಹಲವು ಜಾನಪದ ಕಾರ್ಯಕ್ರಮಗಳು.

ಇದರ ಜತೆಯಲ್ಲೇ ಮದ್ಯಪಾನ, ಧೂಮಪಾನಗಳ ದುಷ್ಪರಿಣಾಮ ಕುರಿತು ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸಲು, ಪ್ರಸ್ತುತ ಸಾಮಾಜಿಕ ಸಮಸ್ಯೆಗಳಾಗಿರುವ ಹೆಣ್ಣು ಶಿಶು ಹತ್ಯೆ, ವಿಕಲಚೇತನರ ಸಮಸ್ಯೆ ಕುರಿತು ಮಾಹಿತಿ ಒದಗಿಸಲು ಸ್ವಯಂ ಸೇವಾ ಸಂಸ್ಥೆಗಳ ಸಹಕಾರದೊಂದಿಗೆ ಕಾಲೇಜು ಆವರಣದಲ್ಲಿ ಮಾಹಿತಿ ಮಳಿಗೆಗಳನ್ನು ತೆರೆಯಲಾಗಿದೆ.



ಶೇಷಾದ್ರಿಪುರಂ ಕಾಲೇಜು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಅಂತರ ಕಾಲೇಜು ಸಾಂಸ್ಕೃತಿಕ - ಸಾಮಾಜಿಕ ಹಬ್ಬವನ್ನು ರೈಟ್ ಲೈವ್ಲಿಹುಡ್ ಪ್ರಶಸ್ತಿ ಪುರಸ್ಕೃತ ಡಾ. ಎಚ್. ಸುದರ್ಶನ್ ಮಂಗಳವಾರ ಉದ್ಘಾಟಿಸಿದರು. ಶಾಸಕ ದಿನೇಶ್ ಗುಂಡೂರಾವ್, ಪ್ರಾಂಶುಪಾಲ ಪ್ರೊ. ಎಂ.ಆರ್. ಶ್ರೀನಿವಾಸ್, ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಪಾಲ್ಗೊಂಡಿದ್ದರು.

ಕನ್ನಡಪ್ರಭ, ಬುಧವಾರ, 3 ಜನವರಿ 2007

## ಸ್ಪರ್ಶ 2007

ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ ಅಂತರ್ ಕಾಲೇಜು ಸ್ಪರ್ಧಾವಳಿ ಸ್ಪರ್ಶ 2006 –07 ಕಾರ್ಯಕ್ರಮವನ್ನು ಡಾ.ಎಚ್.ಸುದರ್ಶನ್ ಉದ್ಘಾಟಿಸಿದರು. ಬಿ.ಎಂ.ಪಾರ್ಥಸಾರಥಿ, ಶಾಸಕ ದಿನೇಶ್ ಗುಂಡೂರಾವ್, ಎ.ಆರ್.ಶ್ರೀನಿವಾಸಯ್ಯ ಹಾಗೂ ಪ್ರೊ.ಶ್ರೀನಿವಾಸ್ ಉಪಸ್ಥಿತರಿದ್ದರು.



ಉದಯವಾಣಿ

3-1-2007



ಶೇಷಾದ್ರಿಪುರಂ ಕಾಲೇಜಿನಲ್ಲಿ ಮಂಗಳವಾರ ಏರ್ಪಡಿಸಿದ್ದ ಅಂತರಕಾಲೇಜು ಸಾಂಸ್ಕೃತಿಕ ಉತ್ಸವವನ್ನು ಡಾ. ಎಚ್. ಸುದರ್ಶನ್ ಉದ್ಘಾಟಿಸಿದರು. ಶಾಸಕ ದಿನೇಶ್‌ಗುಂಡೂರಾವ್, ಬಿ.ಎಂ. ಪಾರ್ಥಸಾರಥಿ, ಎ. ಆರ್. ಶ್ರೀನಿವಾಸಯ್ಯ,ಪ್ರೊ. ಎಂ. ಆರ್. ಶ್ರೀನಿವಾಸ್ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

3-1-2007




ಮಂಗಳವಾರ ಬೆಂಗಳೂರಿನಲ್ಲಿ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನಲ್ಲಿ ಅಂತರ ಕಾಲೇಜು ಸಾಮಾಜಿಕ–ಸಾಂಸ್ಕೃತಿಕ ಉತ್ಸವ 'ಸ್ಪರ್ಶ' ಉದ್ಘಾಟನೆ ಸಮಾರಂಭದಲ್ಲಿ ಶಾಸಕ ದಿನೇಶ್ ಗುಂಡೂರಾವ್, ಡಾ.ಎಚ್. ಸುದರ್ಶನ್, ವೂಡೆ ಪಿ. ಕೃಷ್ಣ ಮೊದಲಾದವರು ಉಪಸ್ಥಿತರಿದ್ದರು.




ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಅಂತರ ಕಾಲೇಜು ಸಾಮಾಜಿಕ - ಸಾಂಸ್ಕೃತಿಕ ಹಬ್ಬ 'ಸ್ಪರ್ಶ-2006-07' ಉತ್ಸವಾರಂಭವನ್ನು ಡಾ. ಎಚ್. ಸುದರ್ಶನ್ ಉದ್ಘಾಟಿಸಿದರು. ಶಾಸಕ ದಿನೇಶ್ ಗುಂಡೂರಾವ್, ಕಾಲೇಜಿನ ಮುಖ್ಯ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಪ್ರಾಂಶುಪಾಲ ಪ್ರೊ. ಎಂ.ಆರ್. ಶ್ರೀನಿವಾಸ್, ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ ಉಪಸ್ಥಿತರಿದ್ದರು.

'ಈ ಸಂಜೆ' ಜನವರಿ 2, 2007
ಪುಟ 3




ನಗರದ ಶೇಷಾದ್ರಿಪುರ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ ಅಂತರ ಕಾಲೇಜು ಸಾಂಸ್ಕೃತಿಕ ಹಬ್ಬ 'ಸ್ಪರ್ಶ-2006-07'ರಲ್ಲಿ ಮಕ್ಕಳ ಗಮನ ಸೆಳೆದ ವೀರಗಾಸೆ ಕುಣಿತ.

ಈ ಸಂಜೆ
ಮಂಗಳವಾರ
02-01-2007




ನಗರದ ಶೇಷಾದ್ರಿಪುರ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ ಅಂತರ ಕಾಲೇಜು ಸಾಂಸ್ಕೃತಿಕ ಹಬ್ಬ ಸ್ಪರ್ಧೆ 2006-07 ರಲ್ಲಿ ಮಕ್ಕಳ ಗಮನ ಸೆಳೆದ ವೀರಗಾಸೆ ಕುಣಿತ.

II | ವಿಜಯ ಕರ್ನಾಟಕ, ಬೆಂಗಳೂರು
ಶನಿವಾರ 5 ಮೇ 2007

# ರೆಡ್‌ಕ್ರಾಸ್ ಸಂಸ್ಥೆಗೆ ಆಯ್ಕೆ

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಗೌರವ ಕೋಶಾಧ್ಯಕ್ಷರಾಗಿ ರಾಜು ಚಂದ್ರಶೇಖರ್ ಮತ್ತು ಉಪ ಸಭಾಧ್ಯಕ್ಷರಾಗಿ ವೂಡೇ ಪಿ. ಕೃಷ್ಣ ಆಯ್ಕೆಯಾಗಿದ್ದಾರೆ.





ಆರೋಗ್ಯ ಸಚಿವ ಆರ್. ಅಶೋಕ್ ಅಧ್ಯಕ್ಷತೆಯಲ್ಲಿ ನಡೆದ ಆಡಳಿತ ಮಂಡಳಿ ಸಭೆಯಲ್ಲಿ ಅವಿರೋಧವಾಗಿ ಆಯ್ಕೆ ಮಾಡಲಾಯಿತು ಎಂದು ಪ್ರಕಟಣೆ ತಿಳಿಸಿದೆ.

ಸಂಜೆವಾಣಿ
ಬುಧವಾರ 18 ಏಪ್ರಿಲ್ 2007

# ಪಿಯು ಫಾರಂ ಸಿಕ್ಕಿದರೆ ಅದೇ ಪುಣ್ಯ!

(ವಿಶೇಷ ವರದಿ)

ಬೆಂಗಳೂರು, ಏ. ೧೮- ಎಸ್‌ಎಸ್‌ಎಲ್‌ಸಿ ಪರೀಕ್ಷಾ ಫಲಿತಾಂಶವನ್ನು ಕಾತುರದಿಂದ ಕಾಯುತ್ತಿರುವ ವಿದ್ಯಾರ್ಥಿ, ಪೋಷಕ ವರ್ಗ ಇದರ ಜತೆಯಲ್ಲಿಯೇ ಪ್ರತಿಷ್ಠಿತ ಕಾಲೇಜುಗಳಲ್ಲಿ ತಮ್ಮ ಮಕ್ಕಳಿಗೆ ಪ್ರವೇಶ ಗಿಟ್ಟಿಸಲು ಹರ ಸಾಹಸಕ್ಕೆ ಮುಂದಾಗಿದ್ದಾರೆ...!

"ಕೂಸು ಹುಟ್ಟುವ ಮುನ್ನ ಕುಲಾವಿ ಹೊಲಿಸಿದಂತೆ" ಎಲ್ಲೋ ಇರುವ ಪರೀಕ್ಷಾ ಫಲಿತಾಂಶಕ್ಕಾಗಿ ಈಗಾಗಲೇ ಪೋಷಕ ವರ್ಗ ತಮ್ಮ ಮಕ್ಕಳಿಗೆ ಇಂತಹುದೇ ಕಾಲೇಜಿನಲ್ಲಿ ಪ್ರವೇಶ ಪಡೆಯಬೇಕೆನ್ನುವ ಆಸೆಗೆ ಪೂರಕವಾಗಿ ಶಿಕ್ಷಣ ಸಂಸ್ಥೆಗಳು ಪ್ರಥಮ ಪಿಯುಸಿ ಪ್ರವೇಶ ಪ್ರಕ್ರಿಯೆಗೆ ಚಾಲನೆ ನೀಡಿವೆ.

ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು, ವಿಜಯ ಕಾಲೇಜು, ನ್ಯಾಷನಲ್ ಕಾಲೇಜು, ಕ್ರೈಸ್ಟ್ ಕಾಲೇಜು ಸೇರಿದಂತೆ ನಗರದ ಮತ್ತಿತರ ಪ್ರತಿಷ್ಠಿತ ಕಾಲೇಜುಗಳಲ್ಲಿ ಪೋಷಕರು, ವಿದ್ಯಾರ್ಥಿಗಳು ಸರತಿ ಸಾಲುಗಳಲ್ಲಿ ನಿಂತು ಪ್ರಥಮ ಪಿಯುಸಿ ಅರ್ಜಿ ಪಡೆಯಲು ಬೆವರು ಸುರಿಸಬೇಕಾಗಿದೆ.

ಇದಕ್ಕೆ ಪೂರಕ ಎನ್ನುವಂತೆಯೂ ಕೂಡ ಶಿಕ್ಷಣ ಸಂಸ್ಥೆಗಳು ಎಸ್‌ಎಸ್‌ಎಲ್‌ಸಿ ಪರೀಕ್ಷಾ ಫಲಿತಾಂಶ ಹೊರ ಬೀಳುವ ಮುನ್ನವೇ ತಮ್ಮ ಕಾಲೇಜುಗಳಲ್ಲಿ ಅರ್ಜಿ ವಿತರಣೆ ಆರಂಭಿಸಿವೆ.

ಮಕ್ಕಳನ್ನು ಪ್ರತಿಷ್ಠಿತ ಕಾಲೇಜಿಗೆ ಸೇರಿಸಿದರೆ ಮಾತ್ರ ಉತ್ತಮ ಅಂಕ ಪಡೆಯಬಲ್ಲರು, ಉತ್ತಮ ಉದ್ಯೋಗ ಪಡೆಯಬಲ್ಲರು

(7 ನೇ ಪುಟ ನೋಡಿ)

# ಪಿಯು ಫಾರಂ ಸಿಕ್ಕಿದರೆ ಅದೇ ಪುಣ್ಯ!

(ಒಂದನೇ ಪುಟದಿಂದ)

ಎಂಬ ಭ್ರಮಾಲೋಕದಲ್ಲಿ ಸಿಲುಕಿರುವ ಪೋಷಕ ವರ್ಗ ಬಿಸಿಲು ಬೇಗೆ, ಅನ್ನ ನೀರು ಎನ್ನದೆ ಸರತಿ ಸಾಲಿನಲ್ಲಿ ನಿಂತು ತಮ್ಮ ಕನಸಿನ ಕಾಲೇಜಿನಲ್ಲಿ ಅರ್ಜಿ ಪಡೆಯಲು ಮುಗಿಬಿದ್ದಿದ್ದಾರೆ.

ಮಕ್ಕಳ ಬದುಕಿನಲ್ಲಿ ಪಿಯು ಶಿಕ್ಷಣ ಅತ್ಯಂತ ಮಹತ್ವದ ತಿರುವು. ಇಲ್ಲಿ ನಾವು ಅಗತ್ಯ ಸಲಹೆ, ಸೂಚನೆ ನೀಡಿ ತಮ್ಮ ಮಕ್ಕಳಿಗೆ ಒಳ್ಳೆಯ ಕಾಲೇಜುಗಳನ್ನೇ ಆಯ್ಕೆ ಮಾಡಿಕೊಳ್ಳುತ್ತಾ ಹೆಜ್ಜೆ ಹಾಕಿದ್ದೇವೆ. ಇದು ನಮ್ಮ ಜವಾಬ್ದಾರಿಯೂ ಕೂಡ ಎನ್ನುತ್ತಾರೆ ಪೋಷಕರೊಬ್ಬರು.

ಇಂದಿನ ಸ್ಪರ್ಧಾ ಜಗತ್ತಿನಲ್ಲಿ ಉತ್ತಮ ಭವಿಷ್ಯ ರೂಪಿಸಿಕೊಳ್ಳಲು ಉತ್ತಮ ಕಾಲೇಜುಗಳನ್ನೇ ಆಯ್ಕೆ ಮಾಡಿಕೊಳ್ಳುತ್ತೇವೆ. ಅದಕ್ಕಾಗಿ ಫಲಿತಾಂಶ ಬರುವ ಮುಂಚೆಯೇ ಪ್ರವೇಶ ಪತ್ರಗಳಿಗಾಗಿ ಕಾದು ನಿಂತಿರುವೆ ಎನ್ನುತ್ತಾನೆ ವಿದ್ಯಾರ್ಥಿಯೊರ್ವ.

ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶನದ ಮೇಲೆ ನಿನ್ನೆಯಿಂದಲೇ ಅರ್ಜಿಗಳನ್ನು ವಿತರಿಸುತ್ತಿದ್ದು, ಅರ್ಜಿಗಳನ್ನು 15 ರೂ.ಗೆ ಮಾರಲಾಗುತ್ತಿದೆ. ಆಸಕ್ತರಿಗೆ ಕಾಲೇಜಿನ ಪ್ರಾಸ್ಪೆಕ್ಟಸ್‌ನ 35 ರೂ.ಗೆ ಮಾರಲಾಗುತ್ತಿದೆ. ಕಳೆದ ವರ್ಷಕ್ಕಿಂತ ಈ ವರ್ಷ ಅತಿ ಹೆಚ್ಚು ಅರ್ಜಿಗಳು ವಿತರಣೆಯಾಗುವ ಸಾಧ್ಯತೆ ಇದೆ. ಏಕೆಂದರೆ ಈ ಬಾರಿ ಪರೀಕ್ಷೆಯಲ್ಲಿ ಪಾಸಾಗುವ ಸಂಖ್ಯೆ ಹೆಚ್ಚಳವಾಗಲಿದೆ. ಹೀಗಾಗಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಮಾರ್ಗದರ್ಶಿಯಂತೆಯೇ ಅರ್ಜಿ ವಿತರಿಸಲಾಗುತ್ತಿದೆ ಎನ್ನುತ್ತಾರೆ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಅವರು. ಪದವಿ ಪೂರ್ವ ಶಿಕ್ಷಣ ಇಲಾಖೆ ನಿಗದಿಪಡಿಸಿದ 15 ರೂ. ಬೆಲೆಗಿಂತ ಹೆಚ್ಚಿನ ದರಕ್ಕೆ ಅರ್ಜಿಗಳನ್ನು ವಿತರಣೆ ಮಾಡುತ್ತಿರುವುದು ಇಲಾಖೆ ಗಮನಕ್ಕೆ ಬಂದಿದೆ. ಈ ಬಗ್ಗೆ ಎಲ್ಲಾ ಕಾಲೇಜುಗಳಿಗೆ ದೂರವಾಣಿ ಮಾಡಿ 15 ರೂ.ಗೆ ಅರ್ಜಿಗಳನ್ನು ಮಾರಾಟ ಮಾಡುವಂತೆ ಸೂಚನೆ ನೀಡಲಾಗಿದೆ. ಹಾಗಿದ್ದೂ ಕೂಡ ದುಬಾರಿ ಬೆಲೆಗೆ ಅರ್ಜಿ ಮಾರಾಟ ಮಾಡಿದರೆ ಅಂತಹ ಕಾಲೇಜುಗಳಿಗೆ ಶೋಕಾಸ್ ನೋಟೀಸ್ ಜಾರಿ ಮಾಡಿ ಕ್ರಮ ಕೈಗೊಳ್ಳುವುದಾಗಿ ಶಿಕ್ಷಣ ಮಂಡಳಿ ಎಚ್ಚರಿಕೆ ನೀಡಿದೆ.

ಎಸ್‌ಎಸ್‌ಎಲ್‌ಸಿ ಪರೀಕ್ಷೆ ಫಲಿತಾಂಶ ಬಂದು ಐದು ದಿನಗಳವರೆಗೆ ಅರ್ಜಿ ವಿತರಿಸಲು ಸೂಚನೆ ನೀಡಲಾಗಿದೆ ಎಂದು ಪದವಿ ಪೂರ್ವ ಶಿಕ್ಷಣ ಇಲಾಖೆ ತಿಳಿಸಿದೆ.

ವಿದ್ಯಾರ್ಥಿಗಳು ಅರಳುವ ಹೂವಿನಂತೆ. ಆ ಹೂವನ್ನು ಬಲವಂತವಾಗಿ ಅರಳಿಸುವ ಪ್ರಯತ್ನಕ್ಕೆ ಮುಂದಾಗಬಾರದು. ಪೋಷಕ ವರ್ಗ ತಮ್ಮ ಸ್ವಪ್ರತಿಷ್ಠೆಗಾಗಿ ಇಂತಹುದೇ ಕಾಲೇಜಿನಲ್ಲಿ ಪ್ರವೇಶ ಬೇಕು ಎಂದು ಪಟ್ಟು ಹಿಡಿದು ಪ್ರವೇಶ ಗಿಟ್ಟಿಸಿದರೂ ವಿದ್ಯಾರ್ಥಿಗಳು ನಿರಾಸಕ್ತಿ ತೋರಿಸಿದರೆ ಆಸೆಗೆ ತಣ್ಣೀರೆರಚಿದಂತಾಗುತ್ತದೆ. ವಿದ್ಯಾರ್ಥಿಗಳಿಗೆ ಕೆಲವು ಮಾರ್ಗದರ್ಶನಗಳೊಂದಿಗೆ ಆಯ್ಕೆಯ ಅವಕಾಶ ಬಿಡಬೇಕಾಗಿದೆ.

ತಮ್ಮ ಮಕ್ಕಳಿಗೆ ಉತ್ತಮ ಕಾಲೇಜಿನಲ್ಲಿಯೇ ಪ್ರವೇಶ ಪಡೆಯಲೇಬೇಕೆಂಬ ಹಠಕ್ಕೆ ಬಿದ್ದಿರುವ ಪೋಷಕ ಸಮುದಾಯ ಇನ್ನಿಲ್ಲದ ಕಸರತ್ತಿನಲ್ಲಿ ನಿರತವಾಗಿದೆ.

ಸಂಯುಕ್ತ ಕರ್ನಾಟಕ, ಬೆಂಗಳೂರು 14-4-2007

# 'ಸಮಾಜದ ಒಳಿತಿನ ಚಿಂತನೆ ಪ್ರತಿಯೊಬ್ಬನ ಜವಾಬ್ದಾರಿ'

ಬೆಂಗಳೂರು, ಏ. 13- 'ಸಮಾಜದ ಒಳಿತಿಗಾಗಿ ಚಿಂತಿಸುವ ಜವಾಬ್ದಾರಿ ಪ್ರತಿಯೊಬ್ಬನ ಮೇಲಿದೆ. ಪೂರಕ ಸಮಾಜದ ನಿರ್ಮಾಣಕ್ಕಾಗಿ ಎಲ್ಲರೂ ಸೇವಾ ಮನೋಭಾವನೆಯಿಂದ ಕೆಲಸ ಮಾಡಬೇಕು' ಎಂದು ಮುಖ್ಯಮಂತ್ರಿಯವರ ಸಂಸದೀಯ ಕಾರ್ಯದರ್ಶಿ ಮಹಿಮಾ ಜೆ. ಪಟೇಲ್ ಕರೆ ನೀಡಿದರು.

ಬೆಂಗಳೂರಿನ ವಿವೇಕಯುಗ ಫೌಂಡೇಶನ್ ಹಾಗೂ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಸಹಯೋಗದಲ್ಲಿ ಏರ್ಪಡಿಸಿದ್ದ 'ಶಾಸಕರು ಮತ್ತು ಯುವಕರು-ಒಂದು ಮುಖಾಮುಖಿ' ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು. ಬೇರೆಯವರಲ್ಲಿ ತಪ್ಪನ್ನು ಹುಡುಕುವುದರಿಂದ ಯಾವುದೇ ಒಳ್ಳೆಯ ಕಾರ್ಯ ಸಾಧನೆಯನ್ನು ಮಾಡಲಿಕ್ಕಾಗುವುದಿಲ್ಲ. ನಾವೆಲ್ಲರೂ ಒಂದೇ ಎನ್ನುವ ಭಾವನೆಯಿಂದ ಮಾತ್ರ ಮನುಷ್ಯರ ನಡುವೆ ಇರುವ ಅಂತರ ಕಡಿಮೆಯಾಗಿ ಸಮಾಜದ ಪರಿವರ್ತನೆಗೆ ಸಹಾಯವಾಗುತ್ತದೆ ಎಂದ ಅವರು, ನಾನು ಮತ್ತು ನನ್ನದು ಎನ್ನುವ ಸ್ವಾರ್ಥ ಹೆಚ್ಚಾಗಿರುವುದರಿಂದ ಸಮಾಜದಲ್ಲಿ ಭ್ರಷ್ಟಾಚಾರ ಹೆಚ್ಚಾಗುತ್ತಿದೆ. ನಾವೆಲ್ಲರೂ ನಮ್ಮವರೆಲ್ಲರಿಗಾಗಿ ಎನ್ನುವ ಭಾವನೆ ಬೆಳೆಯಬೇಕಾಗಿದೆ ಎಂದು ಅಭಿಪ್ರಾಯಪಟ್ಟರು.

ಮುಖ್ಯ ಅತಿಥಿಯಾಗಿ ಪಾಲ್ಗೊಂಡಿದ್ದ ರಾಜ್ಯ ಯುವ ಕಾಂಗ್ರೆಸ್ ಅಧ್ಯಕ್ಷ ಹಾಗೂ ಶಾಸಕ ದಿನೇಶ್ ಗುಂಡೂರಾವ್ ಮಾತನಾಡಿ, ಪ್ರಸ್ತುತ ರಾಜಕೀಯ ವ್ಯವಸ್ಥೆಯಲ್ಲಿ ವಿದ್ಯಾವಂತ ಯುವಕರ ಪಾಲ್ಗೊಳ್ಳುವಿಕೆ ಕಡಿಮೆಯಾಗುತ್ತಿರುವುದಕ್ಕೆ ವಿಷಾದ ವ್ಯಕ್ತಪಡಿಸಿದರು. ವಿದ್ಯಾವಂತ, ವಿಚಾರವಂತ ಯುವಕರು ಚುನಾವಣೆಗಳಲ್ಲಿ ಸಕ್ರಿಯವಾಗಿ ಮತ ಚಲಾಯಿಸುವ ಮೂಲಕ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಬೇಕು ಎಂದು ಕರೆ ನೀಡಿದರು.



ಬೆಂಗಳೂರಿನ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಸಹಯೋಗದೊಡನೆ ವಿವೇಕಯುಗ ಫೌಂಡೇಶನ್ ಏರ್ಪಡಿಸಿದ್ದ ಶಾಸಕರ ಜತೆಗಿನ ಮುಖಾಮುಖಿ ಕಾರ್ಯಕ್ರಮದಲ್ಲಿ ಮಹಿಮಾ ಪಟೇಲ್, ವಿಶ್ವೇಶ್ವರ ಹೆಗಡೆ ಕಾಗೇರಿ, ದಿನೇಶ್ ಗುಂಡೂರಾವ್, ಎಚ್.ಸಿ. ಬಾಲಕೃಷ್ಣ, ವೂಡೆ ಪಿ. ಕೃಷ್ಣ, ಡಿ.ಎಂ. ಹೆಗಡೆ, ಡಾ. ಎಂ.ಪ್ರಕಾಶ್ ಮೊದಲಾದವರು ಪಾಲ್ಗೊಂಡಿದ್ದರು.

ರಾಜ್ಯ ಬಿಜೆಪಿ ಉಪಾಧ್ಯಕ್ಷ ಹಾಗೂ ಶಾಸಕ ವಿಶ್ವೇಶ್ವರ ಹೆಗಡೆ ಕಾಗೇರಿ ಮಾತನಾಡಿ, ಪ್ರಸಕ್ತ ದಿನಮಾನದಲ್ಲಿ ಎಲ್ಲಾ ಕ್ಷೇತ್ರಗಳೂ ಕಲುಷಿತಗೊಂಡಿವೆ. ರಾಜಕೀಯ ಕ್ಷೇತ್ರವೂ ಇದಕ್ಕೆ ಹೊರತಾಗಿಲ್ಲ. ಎಲ್ಲಾ ಕ್ಷೇತ್ರಗಳೂ ಸಮಾಜ ಮುಖಿಯಾಗಿ ಬದಲಾಗಲು ಸ್ವಾಭಿಮಾನವನ್ನು ಜಾಗೃತಗೊಳಿಸುವಂತಹ ಶಿಕ್ಷಣದ ಅವಶ್ಯಕತೆ ಇದೆ ಎಂದ ಅವರು ಈ ದೇಶದ ಪ್ರತಿಯೊಬ್ಬ ಪ್ರಜೆಗೂ ಒಂದೇ ಕಾನೂನು, ಒಂದೇ ಸಂವಿಧಾನ ಇರಬೇಕು ಎಂದು ಅಭಿಪ್ರಾಯಪಟ್ಟರು.

ಶಾಸಕ ಎಚ್.ಸಿ. ಬಾಲಕೃಷ್ಣ ಮಾತನಾಡಿ, ವಿದ್ಯಾರ್ಜನೆ ಕೇವಲ ನೌಕರಿ ಗಳಿಸುವ ಅಥವಾ ಸ್ವಾರ್ಥ ಸಾಧನೆಗೆ ಬಳಕೆಯಾಗುವ ಸಾಧನವಾಗಬಾರದು. ವ್ಯಕ್ತಿಯ ವೈಚಾರಿಕ ಹಾಗೂ ಸಾಮಾಜಿಕ ಅಂಕುಡೊಂಕುಗಳನ್ನು ತಿದ್ದಲಿಕ್ಕೆ ಶಿಕ್ಷಣ ಸಹಾಯವಾಗಬೇಕು ಎಂದರು. ವಿಧಾನ ಪರಿಷತ್ ಸದಸ್ಯ ಆರ್.ವಿ. ವೆಂಕಟೇಶ್ ಈ ಸಂದರ್ಭದಲ್ಲಿ ಉಪಸ್ಥಿತರಿದ್ದು ಮಾತನಾಡಿದರು.

ಅಧ್ಯಕ್ಷತೆ ವಹಿಸಿದ್ದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮಾತನಾಡಿ, ಸಮಾಜದ ಹಾಗೂ ದೇಶದ ಕೆಡುತ್ತಿರುವ ವ್ಯವಸ್ಥೆಯನ್ನು ಬದಲಾಯಿಸಲು ವಿದ್ಯಾವಂತ ಯುವಕರಿಂದ ಮಾತ್ರ ಸಾಧ್ಯ. ಇಂತಹ ಕಾರ್ಯಕ್ರಮಗಳಿಂದ ಯುವಕರಲ್ಲಿ ಹೊಸ ಚಿಂತನೆ ಹಾಗೂ ಹೊಸ ಬದಲಾವಣೆ ಕಾಣಲಿಕ್ಕೆ ಸಾಧ್ಯ ಎಂದು ಅಭಿಪ್ರಾಯಪಟ್ಟರು.

ಪ್ರಜಾವಾಣಿ
ಗುರುವಾರ 1ನೇ ಫೆಬ್ರುವರಿ 2007

# ಶಿಕ್ಷಣದಿಂದ ಮಾತ್ರ ಅಭಿವೃದ್ಧಿ: ಸಿದ್ದಗಂಗಾ ಶ್ರೀ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಈ ದೇಶದ ಉದ್ಧಾರ ಶಿಕ್ಷಣದಿಂದ ಮಾತ್ರ ಸಾಧ್ಯ' ಎಂದು ಸಿದ್ಧಗಂಗಾ ಮಠದ ಡಾ. ಶಿವಕುಮಾರ ಸ್ವಾಮೀಜಿ ಬುಧವಾರ ಇಲ್ಲಿ ಹೇಳಿದರು.

ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅವರ 96ನೇ ಹುಟ್ಟುಹಬ್ಬ ಆಚರಣೆ ಹಾಗೂ ಸಂಸ್ಥೆಯ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದವರಿಗೆ 'ಸೇವಾ ಪುರಸ್ಕಾರ' ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಎಚ್.ಎ. ರಂಗನಾಥ್ ಮಾತನಾಡಿ ಗುಣಮಟ್ಟದ ಶಿಕ್ಷಣಕ್ಕೆ ಹೆಸರಾಗಿರುವ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಸ್ವಾಯತ್ತ ಸ್ಥಾನ ಪಡೆಯಲು ಪ್ರಯತ್ನಿಸಬೇಕು ಎಂದು ಹೇಳಿದರು.

ರಾಷ್ಟ್ರ ಪ್ರಶಸ್ತಿ ವಿಜೇತ ಸಂಸ್ಥೆಯ ವಿದ್ಯಾರ್ಥಿ ಚಿ. ಮುಕುಂದ್ ತಿವಾರಿ, ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ವೊಡೇ ಪಿ. ಕೃಷ್ಣ, ಉಪಾಧ್ಯಕ್ಷರಾದ ಎನ್.ಆರ್. ಪಂಡಿತಾರಾಧ್ಯ, ಗೌರವ ಕೋಶಾಧ್ಯಕ್ಷ ಟಿ.ಎಸ್. ಹೆಂಜಾರಪ್ಪ, ಗೌರವ ಜಂಟಿ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ ಮತ್ತಿತರ ಗಣ್ಯರು ಹಾಜರಿದ್ದರು.